# ಶ್ರೀಗಂಧ

ಕನ್ನಡ ಬರಹಗಳ ಸುಗಂಧ

ಜನವರಿ 2024
ಸಂಚಿಕೆ-1

ಕವಿ ಪರಿಚಯ

ಕಥೆ, ಮೈಕ್ರೋ ಕಥೆ

ಕವನ

ಹಾಸ್ಯ

ಲಲಿತ ಪ್ರಬಂಧ

ಪುಸ್ತಕ ವಿಮರ್ಶೆ

ವೈಚಾರಿಕ ಲೇಖನ

DIGITAL MAGAZINE

ಜೋಗ ಜಲಪಾತ , ಕರ್ನಾಟಕ

## ಪರಿವಿಡಿ

# ಮೊದಲ ನುಡಿ – ಹಚ್ಚೇವು ಕನ್ನಡದ ದೀಪ

ಎಲ್ಲಾ ಕನ್ನಡಿಗರಿಗೂ ನಮಸ್ಕಾರ.

ನಮ್ಮ ರಾಜ್ಯವು ಕರ್ನಾಟಕ ಎಂಬ ಸುಂದರ ಹೆಸರು ಪಡೆದ ೫೦ರ ಸಂಭ್ರಮದಲ್ಲಿ ಇರುವಾಗಲೇ ಅನ್ನಿಸಿದ್ದು, ಈ ಡಿಜಿಟಲ್ ಯುಗದಲ್ಲಿ, ಮುದ್ರಿತ ಕನ್ನಡ ಪುಸ್ತಕಗಳನ್ನು ಓದುವವರು ಗಣನೀಯವಾಗಿ ಕಡಿಮೆಯಾಗಿದ್ದಾರೆ. ಹಾಗೆಂದು ನಾವು ನೀವು ಕನ್ನಡವನ್ನು ಹಾಗೆಯೇ ಬಿಡಲಾದೀತೇ?

ಮನೆ ಮನೆಗಳಲ್ಲಿ ಮನ ಮನಗಳಲ್ಲಿ ಕನ್ನಡದ ದೀಪ ಹಚ್ಚಿ ಬೆಳಕು ಮೂಡಿಸುವಾಸೆ ಕವಿ ಡಿ ಎಸ್ ಕರ್ಕಿಯವರಿಗೆ, ಕಲ್ಪನೆಯ ಕಣ್ಣು ಹರಿಯುವ ತನಕ ದೀಪದ ಬೆಳಕು ಚೀರಬೇಕು. ಹಿರಿಯರು ಗಳಿಸಿದ ಹೆಸರನ್ನು ಉಳಿಸಲು ಎಲ್ಲರೂ ಒಂದುಗೂಡಿ ಕನ್ನಡ ದೀಪ ಹಚ್ಚಿ ಮಾಂಗಲ್ಯಗೀತೆ ಹಾಡೇವು ಎನ್ನುತ್ತಾರೆ ಕವಿ.

ಹಚ್ಚೇವು ಕನ್ನಡದ ದೀಪ
ಹಚ್ಚೇವು ಕನ್ನಡದ ದೀಪ

ಕರುನಾಡ ದೀಪ ಸಿರಿನುಡಿಯ ದೀಪ
ಒಲವೆತ್ತಿ ತೋರುವ ದೀಪ
ಹಚ್ಚೇವು ಕನ್ನಡದ ದೀಪ
ಹಚ್ಚೇವು ಕನ್ನಡದ ದೀಪ

ವೃತ್ತಿಯಲ್ಲಿ ಇಂಜಿನಿಯರ್ ಆದ ನಾನು ಮೂಲತಃ ಬರಹಗಾರನಲ್ಲದೇ ಇದ್ದರೂ, ಸಾಹಿತ್ಯಾಸಕ್ತ ಎಂದು ಹೇಳಬಹುದು. ನನ್ನ ಪತ್ನಿ ಶ್ರೀಮತಿ ಸುಮ ಉಮೇಶ್ ಬರಹಗಾರಳಾಗಿ, ಸಾಹಿತ್ಯದ ಬಳಗಗಳಲ್ಲಿ ನಿರ್ವಾಹಕಿಯಾಗಿ ಅನೇಕರಿಗೆ ಸದಾ ಪ್ರೋತ್ಸಾಹಿಸುತ್ತಾ ಸಕ್ರಿಯಳಾಗಿರುವ ಬೆನ್ನಲ್ಲೇ, ನನಗೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಸಣ್ಣ ಮಟ್ಟದಲ್ಲಿಯಾದರೂ ತೊಡಗಿಸಿಕೊಳ್ಳಬೇಕೆಂಬ ಮಹದಾಸೆ ಮೊಳಕೆಯೊಡೆಯಿತು.

ಆ ಆಸೆಯೆಂಬ ಮೊಳಕೆ ಚಿಗುರೊಡೆದು ಹೆಮ್ಮರವಾಗಿ ಇಂದು ನಿಮ್ಮ ಮುಂದೆ ಬಂದಿರುವುದೇ "ಶ್ರೀಗಂಧ ಡಿಜಿಟಲ್ ಪತ್ರಿಕೆ". ಆಸೆ ಮಾತ್ರ ಹೆಮ್ಮರವಾಗಿದೆ. ಪತ್ರಿಕೆ ಹೆಮ್ಮರವಾಗಿ ಬೆಳೆಯಲು ಎಲ್ಲರ ಪ್ರೋತ್ಸಾಹ ಅಗತ್ಯ. ಈಗಾಗಲೇ ಸಾಕಷ್ಟು ಈ-ಪತ್ರಿಕೆಗಳು, ನಿಯತಕಾಲಿಕೆಗಳು, ಬ್ಲಾಗ್ಸ್ ಗಳು, ಡಿಜಿಟಲ್ ಯುಗದಲ್ಲಿ ಕನ್ನಡದ ಬೆಳವಣಿಗೆಯಲ್ಲಿ ಕೈ ಜೋಡಿಸುತ್ತಿದ್ದಾರೆ. ಅವರ ಕೆಲಸ ಶ್ಲಾಘನೀಯ.

ಹೀಗೆ ಡಿಜಿಟಲ್ ಮಾಧ್ಯಮಗಳ ಮೂಲಕ ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ "ಶ್ರೀಗಂಧ" ಎಂಬ ಡಿಜಿಟಲ್ ಮ್ಯಾಗಝೀನನ್ನು ಹೊರತರುವ ಮೂಲಕ ಕನ್ನಡ ಬರಹಗಳನ್ನು ಎಲ್ಲರಿಗೂ ತಲುಪಿಸುವ ಸಣ್ಣ ಪ್ರಯತ್ನ ನಮ್ಮದು. ಶ್ರೀಗಂಧದ ಘಮ ಪಸರಿಸಲು ಕನ್ನಡದ ಲೇಖಕರು, ಕವಿ ಮಿತ್ರರು ಮತ್ತು ಓದುಗರ ಸಹಕಾರ ಅತ್ಯಗತ್ಯ.

ಇದರಲ್ಲಿ ಹವ್ಯಾಸಿ ಬರಹಗಾರರಿಂದ ಸ್ವರಚನೆಯ ಕಥೆ, ಕವನ, ವೈಚಾರಿಕ ಲೇಖನ, ಹಾಸ್ಯ, ಪುಸ್ತಕ ವಿಮರ್ಶೆ, ಲಲಿತ ಪ್ರಬಂಧ, ವ್ಯಕ್ತಿ ಪರಿಚಯ, ಸ್ಥಳ ಪರಿಚಯ ಮುಂತಾದವುಗಳನ್ನು ಪ್ರಕಟಿಸಲು ಬರಹಗಳನ್ನು ಆಹ್ವಾನಿಸುತ್ತಿದ್ದೇವೆ. "ಶ್ರೀಗಂಧ" ಪತ್ರಿಕೆ ಫೇಸ್ಬುಕ್ನ ಯಾವುದೇ ನಿರ್ದಿಷ್ಟ ಸಾಹಿತ್ಯದ ಗುಂಪುಗಳಿಗೆ ಸೀಮಿತವಾಗದೆ ಪ್ರತಿ ಕನ್ನಡಿಗರ ಹೆಮ್ಮೆಯ ಕೈಗೂಸಾಗಬೇಕೆಂದು ನಮ್ಮ ಅಭಿಲಾಷೆಯಾಗಿದೆ. ಹಾಗಾಗಿ ಬರವಣಿಗೆಯಲ್ಲಿ ಆಸಕ್ತಿ ಹೊಂದಿದ ಯಾರೇ ತಮ್ಮ ಬರಹಗಳನ್ನು ಕಳಿಸಿದರೂ, ಸುಂದರ ವಿನ್ಯಾಸದೊಂದಿಗೆ ಪ್ರಕಟಿಸುವ ಇಚ್ಛೆ ನಮ್ಮದು. ಇದು ಸಾಕಷ್ಟು ಸಮಯ ಬೇಡುವ ಕೆಲಸವಾದ್ದರಿಂದ, ಸದ್ಯಕ್ಕೆ ತಿಂಗಳಿಗೆ ಒಂದು ಸಂಚಿಕೆ ಮಾತ್ರ ಪ್ರಕಟಿಸುವ ಯೋಜನೆ ಹಾಕಿಕೊಂಡಿದ್ದೇವೆ.

ಈ ನಮ್ಮ ಪುಟ್ಟ ಪ್ರಯತ್ನ ಯಾವುದೇ ವ್ಯಾಪಾರಿ ಮನೋಭಾವದಿಂದ ಮಾಡುತ್ತಿಲ್ಲವಾದ್ದರಿಂದ, ಇಲ್ಲಿ ಹಣಕಾಸಿನ ಪ್ರಶ್ನೆ ಉದ್ಭವಿಸುವುದಿಲ್ಲ ಎಂದು ಸ್ಪಷ್ಟ ಪಡಿಸುತ್ತಿದ್ದೇವೆ.

ಆಸಕ್ತರು ತಮ್ಮ ಬರಹಗಳನ್ನು shrigandhadigital@gmail.com ಗೆ "ಇ - ಮೇಲ್" ಮಾಡುವ ಮೂಲಕ ಅಥವಾ ವಾಟ್ಸಪ್ ಸಂಖ್ಯೆ 7204021604 ಗೆ ಕಳುಹಿಸಬಹುದು. ಭಾಷಾ ಪ್ರೌಢಿಮೆ, ಬರಹಗಳ ಗುಣಮಟ್ಟಕ್ಕೆ ಪ್ರಾಶಸ್ತ್ಯ ಕೊಟ್ಟು, ಆಯ್ದ ಬರಹಗಳನ್ನು ಪ್ರಕಟಿಸಲಾಗುತ್ತದೆ.

ಧನ್ಯವಾದಗಳೊಂದಿಗೆ
ಉಮೇಶ್ ಬಿ ಪಿ ಮತ್ತು ತಂಡ

# ನನ್ನ ನೆಚ್ಚಿನ ಕವಿ ಮತ್ತು ಅವರ ವೈಶಿಷ್ಟ್ಯ

-ಉಮೇಶ್ ಬಿ ಪಿ.

ನಮ್ಮ ಕನ್ನಡದ ಹೆಸರಾಂತ ಕವಿಗಳಲ್ಲಿ ನೆಚ್ಚಿನ ಕವಿಗಳನ್ನು ಆರಿಸುವುದು ಬಹಳ ಕಷ್ಟದ ಕೆಲಸ. ಎಲ್ಲರೂ ಕನ್ನಡದ ಮುತ್ತುಗಳು ಅನ್ನಬಹುದು. ಅವರುಗಳ ಅನನ್ಯ ಸಾಹಿತ್ಯ ಸೇವೆ ಶ್ಲಾಘನೀಯ.

ನಾನು ನನ್ನ ನೆಚ್ಚಿನ ಕವಿ ಕೆ. ಎಸ್. ನರಸಿಂಹಸ್ವಾಮಿ



ಕನ್ನಡ ಸಾಹಿತ್ಯದ ಗಂಧವೇ ಗೊತ್ತಿಲ್ಲದವರನ್ನೂ ಕೂಡ ತಮ್ಮ ಕೃತಿಗಳ ಮೂಲಕ ಸೆಳೆದ ಮಹಾನ್ ಪುರುಷ ಎಂದರೆ ತಪ್ಪಾಗಲಾರದು.

ಕಿಕ್ಕೇರಿ ಸುಬ್ಬರಾವ್ ನರಸಿಂಹಸ್ವಾಮಿಯವರು ಮಂಡ್ಯ ಜಿಲ್ಲೆಯವರು. ತಮ್ಮ ಜೀವಿತಾವಧಿಯಲ್ಲಿ ಹಲವಾರು ಸರ್ಕಾರಿ ಸೇವೆಗಳನ್ನು ಸಲ್ಲಿಸಿ, ಕೊನೆಗೆ ಕರ್ನಾಟಕ ಗೃಹ ಮಂಡಳಿಯಲ್ಲಿ ಸೂಪರಿಂಟೆಂಡೆಂಟ್ ಆಗಿ ೧೯೭೦ ರಲ್ಲಿ ನಿವೃತ್ತಿ ಹೊಂದಿದರು. ಜೀವನದುದ್ದಕ್ಕೂ ಆರ್ಥಿಕ ಸಮಸ್ಯೆ, ಸಾಂಸಾರಿಕ ತಾಪತ್ರಯಗಳಲ್ಲಿ ಬದುಕನ್ನು ಸವೆಯುತ್ತಾ ಬಂದರೂ ಅದರ ಚೆಲುವನ್ನು ಮುಕ್ತವಾಗಿ ಬರೆದು ತೋರುತ್ತಾ, ಜೀವನ ಮುಖಿಯಾದ ಕಾವ್ಯವನ್ನು ತಮ್ಮ ವೈಯಕ್ತಿಕ ಬದುಕಿನ ನೆಲೆಯಿಂದಲೇ ಎತ್ತಿಕೊಡುತ್ತಾ ಹೋದದ್ದು ಈ ಕವಿಯ ವೈಶಿಷ್ಟ್ಯ.

ಅವರ ಮೊದಲ ಕೃತಿ " ಮೈಸೂರು ಮಲ್ಲಿಗೆ" ೧೯೪೨ ರಲ್ಲಿ ಪ್ರಕಟಗೊಂಡು ಇಂದಿಗೂ ಮರು ಮುದ್ರಣಗೊಳ್ಳುತ್ತಾ ಜನಮನವನ್ನು ಸೂರೆಗೊಂಡಿದೆ. ಆನಂತರ "ಐರಾವತ" "ದೀಪದ ಮಲ್ಲಿ", "ಉಂಗುರ", "ಇರುವಂತಿಗೆ", "ಶಿಲಾಲತೆ", "ತೆರೆದ ಬಾಗಿಲು", "ನವಪಲ್ಲವ", "ದುಂಡು ಮಲ್ಲಿಗೆ", "ಸಂಜೆ ಹಾಡು", "ಎದೆ ತುಂಬ ನಕ್ಷತ್ರ", "ಮೌನದಲಿ ಮಾತ ಹುಡುಕುತ್ತ", "ದೀಪ ಸಾಲಿನ ನಡುವೆ" -ಇವು ಪ್ರಕಟಗೊಂಡವು.

ಅವರ ಕಾವ್ಯಗಳಲ್ಲಿ ಹೆಚ್ಚಾಗಿ ಪ್ರೇಮ, ಮಧುರ ದಾಂಪತ್ಯಕ್ಕೇ ಒತ್ತು ಕೊಟ್ಟಿರುವುದು ಅವರ ಇನ್ನೊಂದು ವೈಶಿಷ್ಟ್ಯ. ಮಧುರವಾದ, ಅನನ್ಯವಾದ, ತಮ್ಮ ಪ್ರೇಮ-ದಾಂಪತ್ಯದ ಕಾವ್ಯದಿಂದ " ಪ್ರೇಮ ಕವಿ" ಎಂದೇ ಹೆಸರುವಾಸಿಯಾಗಿದ್ದಾರೆ.

ಎಷ್ಟೇ ಹೊಸಕಾವ್ಯಗಳು ಬಂದರೂ ಕೆ ಎಸ್ ನರಸಿಂಹಸ್ವಾಮಿಯವರ "ರಾಯರು ಬಂದರು ಮಾವನ ಮನೆಗೆ" , "ಮೊದಲ ದಿನ ಮೌನ, ಅಳುವೇ ತುಟಿಗೆ ಬಂದಂತೆ", "ನಿನ್ನ ಪ್ರೇಮದ ಪರಿಯ ನಾನರಿಯೆ ಕನಕಾಂಗಿ", "ಒಂದಿರುಳು ಕನಸಿನಲಿ ನನ್ನವಳ ಕೇಳಿದೆನು ಚೆಂದ ನಿನಗಾವುದೆಂದು", " ಸಿರಿಗೆರೆಯ ನೀರಿನಲಿ ಬಿರಿದ ತಾವರೆಯಲ್ಲಿ ಕೆಂಪಾಗಿ ನಿನ್ನ ಹೆಸರು", "ಬಳೆಗಾರ ಚೆನ್ನಯ್ಯ ಬಾಗಿಲಿಗೆ ಬಂದಿಹೆನು" ಮುಂತಾದವುಗಳು ಜನರ ಮನದಲ್ಲಿ ಅಚ್ಚಳಿಯದೇ ಉಳಿದುಬಿಟ್ಟಿವೆ.

ಕಾಲಕಾಲಕ್ಕೆ ಒಗ್ಗುವಂತೆ ತಮ್ಮನ್ನು ತಾವು ನವೀಕರಿಸಿಕೊಂಡು ಕಾವ್ಯಗಳ ರಚಿಸುತ್ತಾ ಹೋಗಿದ್ದು ಕೆ. ಎಸ್ ನರಸಿಂಹಸ್ವಾಮಿಯವರ ಹೆಗ್ಗಳಿಕೆ.

ವಿವಾಹಪೂರ್ವ, ಹೊಸ ದಾಂಪತ್ಯದ, ಹರಯದ ಹೆಣ್ಣುಗಂಡುಗಳ ಒಲವು, ವಿರಹಗಳ ಜಗತ್ತನ್ನು ಕನ್ನಡಕ್ಕೆ ತಂದು ಮನ್ನಣೆ ಗಳಿಸಿದವರು ಕೆ.ಎಸ್.ನ ಎನ್ನಬಹುದು

ಮೈಸೂರು ಮಲ್ಲಿಗೆಯ ಬಹಳಷ್ಟು ಕವಿತೆಗಳು ದಾಂಪತ್ಯಗೀತೆಗಳೇ ಆಗಿವೆ. ಬಹಳ ದಶಕಗಳ ಹಿಂದಿನ ಬದುಕಿನ ಚಿತ್ರಣ ಇಲ್ಲಿದೆ. ಮಧ್ಯಮವರ್ಗ, ಕೆಳವರ್ಗದ ಸಮಾಜವೇ ಇಲ್ಲಿ ಕಾಣಸಿಗುತ್ತದೆ. ಹೆಚ್ಚಾಗಿ ಕವಿತೆಗಳ ಉದ್ದಕ್ಕೂ ಒಂದು ಗ್ರಾಮೀಣ ಪರಿಸರದ ಚಿತ್ರಣವಿದೆ.

ಈ ಮಹಾನ್ ಕವಿ ಚೇತನಕ್ಕೆ ಇಗೋ ನಮ್ಮ ನಮನ.

-೦-

## ಕಥೆ – ಫಿಫ್ಟಿ : ಫಿಫ್ಟಿ

-ಆಶಾ.ಎಂ.ಈಶ್ವರ್

ಮಗನ ಮದುವೆ ಫಿಕ್ಸ್ ಆದ ಸಂಭ್ರಮದಲ್ಲಿದ್ದ ಅರುಂಧತಿ ಮತ್ತು ಪ್ರಶಾಂತ್ ಗೆ ಮಗನ ಮಾತು ಕೇಳಿ ಅವರ ಉತ್ಸಾಹಕ್ಕೆ ತಣ್ಣೀರೆರಚಿದಂತಾಯ್ತು.

ರೋಹನ್: ಅಪ್ಪಾ, ಮದುವೆಯ ಪೂರಾ ಖರ್ಚು ವೆಚ್ಚ ಸಾಕ್ಷಿ ಮನೆಯವರ ಮೇಲೆ ಹೊರಿಸುವುದು ಬೇಡ. ಅರ್ಧ ಖರ್ಚು ನಾವೂ ವಹಿಸಿಕೊಳ್ಳೋಣ.



ಅರುಂಧತಿ: ಮದುವೆಗಿಂತ ಮೊದಲೇ ನಿನ್ನ ತಲೆಕೆಡಿಸಿದ್ಲಾ ಸಾಕ್ಷಿ? ಈಗ್ಲೇ ಅವಳು ಹಾಕೋ ತಾಳಕ್ಕೆ ಕುಣಿದ್ರೆ ಮುಂದೆ ಅವಳ ಗುಲಾಮ ಆಗ್ತೀಯ ಅಷ್ಟೆ.

ರೋಹನ್: ಹಾಗೇನೂ ಇಲ್ಲಮ್ಮ. ಇದು ನನ್ನದೇ ಅಭಿಪ್ರಾಯ. ಅವರಿಗೇನೂ ಗೊತ್ತಿಲ್ಲ. ಈ ವಿಷಯ ನಾನು ಮೊದಲು ನಿಮ್ಮ ಬಳಿ ಚರ್ಚೆ ಮಾಡಿ ನಿಮಗೆ ಒಪ್ಪಿಗೆಯಾದ್ರೆ ಆಮೇಲೆ ಅವರಿಗೆ ನೀವೇ ಹೇಳ್ಬೇಕು.

ಅರುಂಧತಿ: ಅಲ್ಲಾ ಕಣೋ, ನಿಮ್ಮಕ್ಕನ ಮದುವೆಗೆ ನಾವೂ ಲಕ್ಷ ಗಟ್ಟಲೆ ಖರ್ಚು ಮಾಡಿಲ್ವಾ? ನಾವೇನು ಶ್ರೀಮಂತರಾ? ನಮ್ಮ ಹಾಗೇ ಅವರೂ ಅವರ ಮಗಳಿಗೆ ಖರ್ಚು ಮಾಡ್ತಾರೆ ಬಿಡು.

ಪ್ರಶಾಂತ್: ಹೌದು ರೋಹನ್. ನಿಮ್ಮಮ್ಮ ಹೇಳೋದು ಸರಿ ಇದೆ. ರಮ್ಯಾಗೆ ಒಳ್ಳೆಯ ಸಂಬಂಧ ಕೂಡಿ ಬಂತು ಅಂತ ಗಂಡಿನ ಕಡೆಯವರ ಆಸೆಯಂತೆ ಯಾವುದಕ್ಕೂ ಕೊರತೆ ಆಗದ ಹಾಗೆ ಕೂಡಿಟ್ಟ ಹಣದ ಜೊತೆಗೆ ಒಂದಿಷ್ಟು ಸಾಲ ಮಾಡಿ ಮದುವೆ ಮಾಡಿದ್ವಿ. ಈಗ ನಿನ್ನ ಮದುವೆಗೂ ಅರ್ಧ ಖರ್ಚು ವಹಿಸಿಕೊಳ್ಳೋಕೆ ಮತ್ತೆ ಸಾಲ ಮಾಡ್ಬೇಕಾ?

ರೋಹನ್: ನಿಮ್ಮ ಚಿಂತೆ ನನಗೆ ಅರ್ಥ ಆಗುತ್ತೆ ಅಪ್ಪಾ. ಆದರೆ ಈಗ ನಿಮ್ಮ ಮೇಲೆ ಯಾವ ಸಾಲದ ಹೊರೆಯೂ ಇಲ್ಲ ಎಲ್ಲಾ ತೀರಿಸಿದ್ದಾಯ್ತು. ನೀವು ಹೊಸದಾಗಿ ಸಾಲ ಮಾಡೋದೂ ಬೇಕಾಗಿಲ್ಲ. ಕೈತುಂಬಾ ಸಂಪಾದಿಸ್ತಿದೀನಿ. ಆ ಖರ್ಚು ನಾನೇ ವಹಿಸಿಕೊಳ್ಳುವೆ.

ಅರುಂಧತಿ: ನೀನು ಕೊಟ್ರೂ, ನಾವು ಕೊಟ್ರೂ ಇದಕ್ಕೆ ನನ್ನ ಒಪ್ಪಿಗೆಯಿಲ್ಲ. ಎಲ್ಲಾ ಖರ್ಚು ಅವರೇ ಮಾಡ್ಲಿ. ಕೈತುಂಬಾ ಸಂಪಾದಿಸ್ತೀನಿ ಅಂತ ಏನೇನೋ ಆದರ್ಶಗಳನ್ನ ಇಟ್ಕೊಂಡು ಬರಿಗೈ ಮಾಡ್ಕೋಬೇಡ.

ರೋಹನ್: ನನ್ನ ಮಾತಿಗೆ ನೀವು ಒಪ್ಪೋದಾದ್ರೆ ಮಾತ್ರ ಮದುವೆ ಆಗ್ತೀನಿ. ಇಲ್ದಿದ್ರೆ ಯಾರನ್ನೂ ಮದುವೆ ಆಗಲ್ಲ.

ಪ್ರಶಾಂತ್: ಇಷ್ಟೊಂದು ಹಠ ಯಾಕೆ? ಐದಾರು ಸಾವಿರದ ಮಾತಲ್ಲ ಇದು. ಅರ್ಧ ಖರ್ಚು ಅಂದ್ರೆ ಅಂದಾಜು ಏಳೆಂಟು ಲಕ್ಷ ಆಗುತ್ತೆ.

ರೋಹನ್: ಅಕ್ಕನ ಮದುವೆಯಾದಾಗ್ಲೇ ನಾನು ಈ ನಿರ್ಧಾರ ತಗೊಂಡಿದ್ದೆ. ಹೆಣ್ಣು ಹೆತ್ತವರ ಕಷ್ಟ ಸಂಕಟ ನನಗೆ ಅರ್ಥ ಆಗುತ್ತೆ. ಎಲ್ಲಾ ಖರ್ಚುವೆಚ್ಚಗಳನ್ನ ಹೆಣ್ಣು ಹೆತ್ತವರ ಮೇಲೇ ಹೊರಿಸೋದೇಕೆ? ನಿಶ್ಚಿತಾರ್ಥದ ಖರ್ಚು, ಛತ್ರದ ಖರ್ಚು, ಊಟದ ಖರ್ಚು, ಗಂಡಿನ ಕಡೆಯವರು ಬಸ್ ಮಾಡಿಕೊಂಡು ಬಂದರೆ ಅದರ ಖರ್ಚು, ಲಾಡ್ಜ್ ನಲ್ಲಿ ರೂಂ ಬುಕ್ ಮಾಡುವ ಖರ್ಚು, ಬಟ್ಟೆಒಡವೆ ಖರ್ಚು. ಒಂದಾ ಎರಡಾ? ಮದುವೆಯಾದ್ಮೇಲೆ ಮಂಚ, ಹಾಸಿಗೆ ಹೊದಿಕೆ, ಬೀರು, ಸೋಫಾಸೆಟ್, ಪಾತ್ರೆ ಅದೂ ಇದೂ ಅಂತ ಎಷ್ಟೆಲ್ಲಾ ಕೊಡ್ಬೇಕು. ಆಮೇಲೆ ಹೆರಿಗೆಗೆ ಆಸ್ಪತ್ರೆ ಖರ್ಚು, ಬಾಣಂತನ, ನಾಮಕರಣ ಅಂತ ಅದೊಂದಿಷ್ಟು ಖರ್ಚು. ಇಷ್ಟೆಲ್ಲಾ ಖರ್ಚುಗಳನ್ನು ಹೆಣ್ಣು ಹೆತ್ತವರ ತಲೆ ಮೇಲೆ ಹಾಕೋದ್ರಿಂದ್ಲೇ ಅಲ್ವಾ ಹೆಣ್ಣು ಅಂದ್ರೆ ಭಾರ ಹೊರೆ ಅಂದ್ಕೊಳ್ತಾರೆ.

ಅರುಂಧತಿ: ಇದು ಅನಾದಿಕಾಲದಿಂದಲೂ ಬಂದ ಪದ್ಧತಿ. ನಾವು ಬದಲಾಯ್ಸೋಕಾಗುತ್ತೇನೋ ಮಗ.

ರೋಹನ್: ಅದಕ್ಕೆ ಕಣಮ್ಮಾ ಹೇಳ್ತಿರೋದು. ಈ ಬದಲಾವಣೆ ನಮ್ಮಿಂದಲೇ ಮೊದಲು ಶುರುವಾಗ್ಲಿ. ನಾವು ಬದಲಾಗಿ ಬೇರೆಯವರಿಗೆ ಮಾದರಿಯಾಗೋಣ. ಮೊದಲಿಂದಲೂ ಬಂದ ಪದ್ಧತಿ ಹೀಗೇ

ಮುಂದುವರೆದುಕೊಂಡು ಹೋಗಲಿ ಅಂತ ಜಗಣೆ ರಕ್ತ ಹೀರಿದಂಗೆ ಹೆಣ್ಣು ಹೆತ್ತವರ ರಕ್ತ ಹೀರೋದು ಬೇಡ. ಶ್ರೀಮಂತರು ಖುಷಿಯಿಂದ ಎಲ್ಲಾ ಖರ್ಚು ಅವರೇ ವಹಿಸಿಕೊಂಡು ಮಾಡಲಿ. ಅವರಿಷ್ಟ ಅದು. ಆದ್ರೆ ನಮ್ಮಂತ ಮಧ್ಯಮ ವರ್ಗದವರು ಬದಲಾಗ್ಬೇಕು. ನಿಮಗೆ ಒಬ್ಬಳೇ ಮಗಳು. ಅವಳ ಮದುವೆಗೆ ಲಕ್ಷಗಟ್ಟಲೆ ಖರ್ಚು ಮಾಡಿದ್ವಿ ಅಂತ ಹೇಳ್ಕೋತೀರ. ಎರಡ್ಮೂರು ಹೆಣ್ಣುಮಕ್ಕಳಿರುವವರ ಬಗ್ಗೆ ಸ್ವಲ್ಪ ಯೋಚನೆ ಮಾಡಿ. ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವುದರ ಬದಲು ಮದುವೆಗೆ ಅಂತಾನೇ ಹಣ ಕೂಡಿಡ್ತಾರೆ. ನಿಮ್ಮ ಹಾಗೇ ಕೂಡಿಟ್ಟ ಹಣದ ಜೊತೆಗೆ ಸಾಲಸೋಲ ಮಾಡಿ ಆಸ್ತಿ ಮಾರಿ ಮದುವೆ ಮಾಡ್ತಾರೆ. ವಯಸ್ಸಾದ್ಮೇಲೆ ಅವರ ಜೀವನ ಎಷ್ಟು ಕಷ್ಟ ಅಂತ ಅರ್ಥ ಮಾಡ್ಕೊಳ್ಳಿ.

ಪ್ರಶಾಂತ್: ಸಾಕ್ಷಿ ಅಕ್ಕನ ಮದುವೆ ಆಗೋಗಿದೆ. ಈಗ ಅವರಿಗೆ ಅನುಕೂಲವಾಗುವಂತೆ ಸಾಕ್ಷಿ ಮದುವೆ ಮಾಡಿಕೊಡ್ಲಿ ಬಿಡು. ನಮ್ಮ ಅಳಿಯನ ಕಡೆಯವರ ಹಾಗೆ ನಾವೇನೂ ಡಿಮ್ಯಾಂಡ್ ಮಾಡಲ್ಲವಲ್ಲ.

ರೋಹನ್: ಅಪ್ಪಾ, ನಾನೇಳೋದನ್ನ ಸ್ವಲ್ಪ ಅರ್ಥ ಮಾಡ್ಕೊಳ್ಳಿ. ಸಮಾಜದಲ್ಲಿರುವ ಕೆಲವು ಪದ್ಧತಿಗಳಲ್ಲಿ ಬದಲಾವಣೆ ತರ್ಬೇಕು ಅಂತ ನನ್ನಾಸೆ. ನಾನೇನೂ ದೊಡ್ಡ ಕ್ರಾಂತಿ ಮಾಡೋಕೆ ಹೊರಟಿಲ್ಲ. ಇದನ್ನ ಎಲ್ಲರೂ ಒಪ್ಪಿ ಪಾಲಿಸೋಕಾಗಲ್ಲ. ಕೆಲವರಾದ್ರೂ ಬದಲಾಗಲಿ ಅಂತ ನನ್ನಾಸೆ.

ಅರುಂಧತಿ: ಇದು ಆತುರದಲ್ಲಿ ನಿರ್ಧಾರ ತಗೊಳ್ಳುವ ವಿಷಯವಲ್ಲ. ನಿಧಾನವಾಗಿ ಯೋಚಿಸಿ ತೀರ್ಮಾನ ತಗೊಳ್ಳೋಣ.

ರೋಹನ್: ಆಯ್ತುಮ್ಮಾ, ಸಾಕ್ಷಿಗೆ ಕೊಡ್ಬೇಕಾದ ಬಟ್ಟೆ ಒಡವೆ ಕೊಡೋಣ. ಅವಳ ಕಡೆಯವರಿಗೆ ಯಾರ್ಯಾರಿಗೆ ಬಟ್ಟೆ ಕೊಡ್ಬೇಕು ಕೊಡೋಣ. ಹಾಗೆಯೇ ಅವರೂ ಸಹ ನಮಗೇನು ಕೊಡ್ಬೇಕು ಅದೆಲ್ಲ ಕೊಡಲಿ. ಆದರೆ ನಿಶ್ಚಿತಾರ್ಥ, ಛತ್ರ, ಊಟದ ಖರ್ಚು ಇತ್ಯಾದಿ ಇವೆಲ್ಲಾ ಫಿಫ್ಟಿ:ಫಿಫ್ಟಿ ಖರ್ಚು ವಹಿಸಿಕೊಳ್ಳೋಣ.

ಇನ್ನು ರೂಂ ಬುಕ್ ಮಾಡೋದು. ಅವರ ಕಡೆಯವರಿಗೆಷ್ಟು ರೂಮ್ಸ್ ಬೇಕೋ ಅದನ್ನ ಅವರೇ ಬುಕ್ ಮಾಡಲಿ. ನಮಗೆಷ್ಟು ಬೇಕೋ ಅದನ್ನ ನಾವೇ ಮಾಡೋಣ.

ಅರುಂಧತಿ: ಆದ್ರೂ ಯಾಕೋ ನಿನ್ನ ನಿರ್ಧಾರ ಸರಿಕಾಣ್ತಿಲ್ಲ ಕಣೋ. ಮನಸ್ಸಿಗೆ ಕಸಿವಿಸಿ ಆಗ್ತಿದೆ.

ರೋಹನ್: ಕಸಿವಿಸಿ ಮಾಡ್ಕೋಬೇಡಮ್ಮ. ಒಂದು ಹೆಣ್ಣಾಗಿ ನೀನು ಇನ್ನೊಂದು ಹೆಣ್ಣಿನ ಕಷ್ಟ ಅರ್ಥ ಮಾಡ್ಕೋಬೇಕು. ನಂಗೆ ಡಿಗ್ರಿ ಮಾಡ್ಬೇಕು ಅಂತ ಆಸೆ ಇದ್ರೂ ನಮ್ಮಪ್ಪ ಎಸ್ಸೆಸ್ಸೆಲ್ಸಿ ಮುಗೀತಿದ್ದ ಹಾಗೆ ನಿಮ್ಮಪ್ಪಂಗೆ ಗಂಟು ಹಾಕಿ ಹೆಗಲ ಮೇಲಿನ ದೊಡ್ಡ ಜವಾಬ್ದಾರಿ ಕಳೀತು ಅಂದ್ರು ಅಂತ ನೀನೇ ಹೇಳ್ತಿದ್ದೆ. ನಿನ್ನ ಹಿಂದೆ ಇನ್ನಿಬ್ರು ಹೆಣ್ಮಕ್ಕಳ ಜವಾಬ್ದಾರಿ ಇತ್ತು. ಅದಕ್ಕೆ ತಾತ ಹಾಗೆ ಮಾಡಿದ್ರು.

ಅರುಂಧತಿ ಮುಂದೆ ಮಾತಾಡದೆ ಸುಮ್ಮನಾದ್ಲು.

ರೋಹನ್: ನನ್ನ ಆಸೆ ನೋಡಿ ನನ್ನ ಕೆಲವು ಫ್ರೆಂಡ್ಸ್ ಸಹ ಇಂತಹ ನಿರ್ಧಾರ ತಗೊಂಡಿದಾರೆ. ಸಾಕ್ಷಿ ಸಹ ದುಡೀತಿದಾಳೆ. ಮುಂದೆ ಉತ್ತಮ ಜೀವನ ನಡೆಸಲು ಯಾವ ತೊಂದರೆಯೂ ಇಲ್ಲ. ನಾವಿಬ್ಬರೂ ಸೇರಿ ನಿಮ್ಮಿಬ್ಬರನ್ನು ಹಾಗೂ ಅವಳ ಅಪ್ಪ ಅಮ್ಮನನ್ನು ಚೆನ್ನಾಗಿ ನೋಡ್ಕೋತೀವಿ. ಯೋಚನೆ ಮಾಡ್ಬೇಡಾ.

ಒಂದೆರಡು ದಿನ ದಂಪತಿಗೆ ತಲೆತುಂಬಾ ಇದೇ ಯೋಚನೆ. ಮಗನ ನಿರ್ಧಾರ ಕೇಳಿ ಹೆಮ್ಮೆ ಅನಿಸಿದ್ರೂ ಮನಸ್ಸು ಮಾತ್ರ ತೂಗುಯ್ಯಾಲೆ ಆಡುತಿತ್ತು.

ಇಬ್ಬರೂ ಮದುವೆ ಖರ್ಚಿನ ಲೆಕ್ಕ ಹಾಕಿದ್ದೇ ಹಾಕಿದ್ದು. ಕೊನೆಗೆ ಇಬ್ಬರೂ ಒಮ್ಮತದಿಂದ ಮಗನ ನಿರ್ಧಾರಕ್ಕೆ ಗ್ರೀನ್ ಸಿಗ್ನಲ್ ಕೊಟ್ರು. ಬೀಗರ ಮನೆಗೆ ತೆರಳಿ ತಮ್ಮ ವಿಚಾರ ತಿಳಿಸಿದಾಗ ಮೊದಲು ಅವರು ಒಪ್ಪಲಿಲ್ಲ. ತಮ್ಮ ಶಕ್ತ್ಯಾನುಸಾರ ಮದುವೆ ಮಾಡಿಕೊಡುವುದಾಗಿ ಹೇಳಿದ್ರು. ಅವರನ್ನೂ ಒಪ್ಪಿಸಿದ್ದಾಯ್ತು. ಇಂತಹ ಅಳಿಯ ಮತ್ತು ಬೀಗರನ್ನು ಪಡೆದಿದ್ದಕ್ಕೆ ಸಾಕ್ಷಿಯ ತಂದೆ-ತಾಯಿ ಸಂತಸಗೊಂಡರು.

ರೋಹನ್ ಇಷ್ಟಪಟ್ಟಂತೆಯೇ ಸಾಕ್ಷಿ ಜೊತೆ ಮದುವೆಯಾಯಿತು. ಮದುವೆಗೆ ಬಂದವರು ಮನಃಪೂರ್ವಕವಾಗಿ ರೋಹನ್ನನ್ನು ಹೊಗಳಿದರು. ಅವನ ನಿರ್ಧಾರದಿಂದ ಯಾರು ಪ್ರಭಾವಿತರಾಗಿ ಬದಲಾಗ್ತಾರೋ ಗೊತ್ತಿಲ್ಲ. ಸಾಕ್ಷಿ ಮತ್ತು ರೋಹನ್ಗೆ ನಿಮ್ಮೆಲ್ಲರ ಆಶೀರ್ವಾದ ಇರಲಿ.

-o-

# ಖುಷಿಯ ಕಣಜವಾಗಲಿ ಹೊಸ ವರುಷ

-ಸುಮ ಉಮೇಶ್




ವರ್ಷ ಬದಲಾಗಲಿ, ಬದಲಾಗದಿರು ನೀ ಮನುಜ
ಹರ್ಷವಿರಲಿ ಬಾಳಲಿ, ತುಂಬು ಖುಷಿಯ ಕಣಜ
ಉದ್ಯೋಗದುನ್ನತಿಯಾಯ್ತೆಂದು ಮೆರೆಯದಿರೋಣ
ಸುಖಸಂಪದವಾಯ್ತೆಂದು ನಮ್ಮವರತೊರೆಯದಿರೋಣ.

ಕಳೆದ ವರ್ಷದಲಿ ಹಿರಿತಲೆಗಳ ನೋವಿನ ನಿರ್ಗಮನ
ಹೊಸವರ್ಷಕೆ ಸೊಸೆಅಳಿಯಂದಿರ ಸಂತಸಾಗಮನ
ಮಕ್ಕಳ ಕಲರವ ಮನೆ ಮನೆಯಲ್ಲೂ ತುಂಬಲಿ
ಹೊಸಅತಿಥಿಗಳ ಸ್ವಾಗತಕ್ಕೆ ಸರ್ವರೂ ಸಜ್ಜಾಗೋಣ

ಮನೆಮನಗಳಲ್ಲಿ ಶಾಂತಿ ಸೌಹಾರ್ದತೆ ಕಾಪಾಡುತಾ
ನಮ್ಮ ಸಂಸ್ಕೃತಿ ಸಂಸ್ಕಾರ ಮರೆಯದಿರೋಣ
ಬಲಿಷ್ಠರಾಷ್ಟ್ರ ನಿರ್ಮಾಣಕೆ ಕೈ ಜೋಡಿಸುತಾ
ನಮ್ಮ ಅಳಿಲು ಸೇವೆಯ ದೇಶಕೆ ಸಲಿಸೋಣ

ಕರ್ತವ್ಯ ಪಾಲನೆ ಮುಖ್ಯ ಆದ್ಯತೆಯಾಗಲಿ
ಜಡತ್ವ ತೊಡೆದು ಸಕ್ರಿಯತೆಯತ್ತ ಸಾಗೋಣ
ದ್ವೇಷವ ಮೆಟ್ಟಿ ಮಮತೆಯಲಿ ಬದುಕೋಣ
ಒಗ್ಗಟ್ಟು ಮೆರೆಯುತ ಸಗ್ಗಸುಖವ ಕಾಣೋಣ

-o-

# ನಮ್ಸ್ಕಾರ ಸಾ

-ಜ್ಯೋತಿ ಆನಂದ್.



ಕಾಸ್ನಗ್ಲ ಮೋಡ್ವಾಗಿ ತ್ವಾಟ್ವೆಲ್ಲಾ ತಲ್ಬಾಗಿ
ಹಸ ಕರ ದಿಕ್ಕಾಪಾಲಾಗಿ
ಧೂಳೆದ್ದು ಅಡ್ಗೆ ಕ್ವಾಣೆಗ್ ನುಗ್ಗಿ
ಉಬ್ಲು ಬಣವೆ ಬುಡ್ಮೇಲಾಗಿ
ಫಳಾರ್ನೆ ಮಿಂಚಾಗಿ ದಢಾರ್ನೆ ಸಿಡ್ಲಾಗಿ
ಸುಂಟ್ರಗಾಳಿಗ್ ಮಳ್ರಾಯ ಮುಂದೋಗಿ.
ಮಾಯ್ದಂಥಾ ಮಳಿ ಹುಯ್ದು
ಕೇರಿ ಕೇರಿ ಮೈ ತೊಳ್ದು
ಕೆರೆಕುಂಟೇಲ್ ನೀರ್ಬಂದು
ಗೊಟರು ಗುಂಡೀಲ್ ಕಪ್ಪೆಗೊದ್ದ ಎದ್ದು;
ಹಾವು ಚೇಳು ಒನಕೆಮಂಡಿ
ಅಂಗ್ಳಕ್ಕಿಳುದ್ರೆ ಕುಟುಕೊ ಮಂಡಿ.
ಮುಂಗಾರ್ನಂಗೆ ನಮ್ ಮೇಷ್ಟ್ರು
ಶ್ರಾವಣ್ದಂಗೆ ಬಲ್ ಶಿಸ್ತು
ಕಾರ್ತೀಕ್ದಂಗೆ ಬೆಳ್ಕಿನ್ ದೀಪ
ಕ್ವಾಟ್ಲೆ ಕೊಟ್ರೂ ಕಳೀತಾರೆ ತಾಪ.
ಸ್ವಾನೆ ಮಳಿಯಂಗೆ ಅಯ್ಯೋ ಪಾಪ.
ಜಡಿ ಮಳೆಯಂಗ್ ರೋಸ್ತಾರ್ ಇವ್ರು
ಎದ್ರಿಗ್ ನಿಂತ್ ಮಾತಾಡೋರ್ಯಾರು!?
ಮುಂಗಾರೋ ಹಿಂಗಾರೋ ಸ್ವಾನ್ಯೋ ಜಡಿಯೋ
ಬೇಕಲ್ವೆ ಮಳೆ ಬೆಳೆಗೆ
ತಿದ್ದಿ ತೀಡೋಕೆ ಗುರು ಬಧ್ಕಿಗೆ.
ಲಾಲ್ಸಿ ಪಾಲ್ಸಿ ತಡ್ದು ಜಡ್ದು
ಮಂಡಿಗಂಟ ಇದ್ ಕೂಸ್ನ
ತಲೆಎತ್ ಕೇಳ್ತಾವ್ರೀಗವ್ನ ಭಾಷ್ಣ!!
ವಾಚು ಉಂಗ್ರ ಚಸ್ಮಾ ಊಗೋರ್ಲು
ಜರಿಪೇಟ ರೇಷ್ಮೆ ರುಮಾಲು
ಚಡ್ಡಿ ತೊಟ್ಟೋರು ದೊಡ್ಡೋರಾಗಿ
ಮಾಡಿದ್ ಕಮಾಲು
ಮೇಷ್ಟ್ರ ಮೆರ್ವಣಿಗೆ ಊರೂರ್ಲೂ!.
ಮಳೆ ಹುಯ್ದ್ರೆ ಕೇಡಲ್ಲಾ; ಗುರು ಬಾರ್ಸಿದ್ ಕೇಡಿಲ್ಲ
ಸೊಂಪಾಗಿ ಬೆಳ್ದವ್ರೆ ಶಿಷ್ಯರು ನಾಡೆಲ್ಲಾ!
ನಿಮ್ಮಿಂದಲೇ ಹಾಡಾಯ್ತು ನಮ್ ಪಾಡೆಲ್ಲಾ.!!!!!.

-o-



# ಸಾಸಿವೆ ಇಲ್ಲದ ಮನೆಯುಂಟೆ?

-ಜಿಕೆ

ಸಾಸಿವೆ ಇಲ್ಲದ ಮನೆಯುಂಟೆ? ಅದಕ್ಕೆ ಅಲ್ಲವೇ ಬುದ್ಧ ಕಿಸಾಗೋತಮಿಗೆ ಅವಳ ಮಗುವನ್ನು ಬದುಕಿಸಿ ಕೊಡಲು "ಸಾವಿಲ್ಲದ ಮನೆಯ ಸಾಸಿವೆ ತಾ" ಎಂದದ್ದು. ಎಲ್ಲರ ಅಡುಗೆ ಮನೆಯ ಒಗ್ಗರಣೆ ಡಬ್ಬಿಯಲ್ಲಿ ಸಾಸಿವೆಯದು ಪ್ರಧಾನ ಸ್ಥಾನ.

ಎಣ್ಣೆ ಬಿಸಿಯಾಗಿದೆಯೋ ಇಲ್ಲವೋ? ಎಂಬುದನ್ನು ಪರಿಶೀಲಿಸಲು ಸಾಸಿವೆ ಮೊದಲು ಕಾದೆಣ್ಣೆಗೆ ಬೀಳಬೇಕು. ಚಟಪಟ ಚಟಪಟ ಅಂತ ಸದ್ದು ಮಾಡಬೇಕು. ಸಾಸಿವೆ ಸಿಡಿಯುತ್ತಿದ್ದಂತೆಯೇ ಇತರೆ ಸಾಂಬಾರು ಪದಾರ್ಥಗಳು ಎಣ್ಣೆಗೆ ಬಿದ್ದು ಅಡುಗೆ ಮನೆಯನ್ನು ಘಮಗುಡಿಸಬೇಕು. ಇದು ಎಲ್ಲರ ಮನೆಯಲ್ಲಿ ಅಡುಗೆ ಮಾಡುವಾಗಿನ ಒಂದು ಸಾಮಾನ್ಯ ದೃಶ್ಯ.

ಸಾಸಿವೆಯಲ್ಲಿ ಎರಡು ಮೂರು ಬಣ್ಣದ ಸಾಸಿವೆಗಳಿವೆ. ಬಹುತೇಕ ನಾವೆಲ್ಲಾ ಕಪ್ಪು ಬಣ್ಣದ ಸಾಸಿವೆಯನ್ನೆ ಹೆಚ್ಚಾಗಿ ಅಡುಗೆಗೆ ಬಳಸುತ್ತೇವೆ. ಬಿಳಿ ಮತ್ತು ಹಳದಿ ಬಣ್ಣದ ಸಾಸಿವೆಗಳೂ ಇವೆಯಾದರೂ ಅವುಗಳಲ್ಲಿ ಔಷಧೀಯ ಗುಣ ಹೆಚ್ಚಾಗಿ ಇರುವುದರಿಂದ ನಾಟಿ ವೈದ್ಯದಲ್ಲಿ ಇವುಗಳ ಬಳಕೆ ಹೆಚ್ಚು.



ಸಾಸಿವೆ ಭಾರತೀಯ ಸಾಂಬಾರು ಬೆಳೆಗಳಲ್ಲಿ ಒಂದು ಪ್ರಮುಖ ಬೆಳೆಯಾಗಿ ಗುರುತಿಸಲ್ಪಟ್ಟರೂ, ಉತ್ತರ ಭಾರತದಲ್ಲಿ ಬೆಳೆಯುವಷ್ಟು ಸಾಸಿವೆಯನ್ನು ದಕ್ಷಿಣ ಭಾರತದಲ್ಲಿ ಬೆಳೆಯುವುದಿಲ್ಲ. ಉತ್ತರ ಭಾರತೀಯರಿಗೆ ಸಾಸಿವೆ ಒಂದು ತೈಲ ಬೆಳೆಯೂ ಹೌದು. ನಮ್ಮಲ್ಲಿ ನೆಲಗಡಲೆ, ಸೂರ್ಯಕಾಂತಿ ಬೆಳೆಗಳಂತೆ ಉತ್ತರ ಭಾರತೀಯರಿಗೆ ಸಾಸಿವೆ ಅಡುಗೆ ತೈಲವಾಗಿಯೂ ಬಳಸಬಲ್ಲ ಒಂದು ಬೆಳೆ.

ಸಾಸಿವೆಯು ಮೂಲತಃ ಉಷ್ಣ ಗುಣ ಹೊಂದಿದ್ದು, ಇದು ತ್ರಿದೋಷಗಳಲ್ಲಿ ವಾತ, ಕಫವನ್ನು ಕಡಿಮೆ ಮಾಡುವ ಗುಣ ಹೊಂದಿದ್ದರೂ ಪಿತ್ತವಿಕಾರವನ್ನು ಹೆಚ್ಚಿಸುವ ಅವಗುಣವನ್ನೂ ಹೊಂದಿದೆ. ಸಾಸಿವೆಯಲ್ಲಿ ಅನೇಕ ಔಷಧೀಯ ಗುಣ ಇರುವುದರಿಂದ ನರಗಳ ಊತ, ತಲೆನೋವು ಶಮನ, ರಕ್ತ ಹೆಪ್ಪುಗಟ್ಟುವಿಕೆ ತಡೆಯುವಲ್ಲಿ ಇದರ ಬಳಕೆ ಮಾಡಲಾಗುತ್ತದೆ. ಇದರ ತೈಲವನ್ನು ಕೆಲವು ಚರ್ಮರೋಗಗಳನ್ನು ವಾಸಿ ಮಾಡಲೂ ಬಳಸಲಾಗುತ್ತದೆ.

ಚಳಿಗಾಲ ಆರಂಭವಾದರೆ ಸಾಕು ಮಧ್ಯ ಪ್ರದೇಶದಿಂದಮೊದಲ್ಗೊಂಡು ಉತ್ತರಾಖಂಡದ ವರೆಗೂ ಕಣ್ಣು ಹಾಯಿಸಿದೆಡೆಯಲ್ಲಿ ಹೊಲದ ತುಂಬ ಹಸಿರಿನೆಲೆಗಳ ನಡುವೆ ಪುಟ್ಟ ಪುಟ್ಟ ಹಳದಿ ಹೂಗಳನ್ನು ಅರಳಿಸಿ, ಮೈಕೊರೆವ ತಂಪು ಹವೆಗೆ ತಲೆದೂಗುತ್ತಿರುವ ಸಾಸಿವೆ ಬೆಳೆದ ಹೊಲಗಳನ್ನು ನೋಡುವುದೇ ಒಂದು ಸೊಗಸು.

ಸಾಸಿವೆಯ ಹೂಗಳನ್ನು "ಪಾರ್ವತಿಯ ಹೂಗಳು" ಎಂದೂ ಕರೆಯಲಾಗುತ್ತದೆ. ಈ ಕುರಿತು ಒಂದು ದಂತ ಕಥೆಯನ್ನು ಮಧ್ಯಪ್ರದೇಶದ ಆದಿವಾಸಿಗಳು ತಮ್ಮ ಭಾಷೆಯಲ್ಲಿ ಹಾಡುತ್ತಾರೆ.

ಚಳಿಗಾಲದಲ್ಲೊಮ್ಮೆ ದೇವಿ ಪಾರ್ವತಿಗೆ ಹೂವು ಮುಡಿಯುವ ಆಸೆ ಆಯಿತಂತೆ. ಕೈಲಾಸದಿಂದ ಹೊರಟು ಗಂಗೆ ಹರಿಯುವ ನೆಲದಲ್ಲೆಲ್ಲಾ ನೋಡಿದರೆ ದೇವಿಗೆ ಎಲ್ಲೂ ಹೂವುಗಳೇ ಕಾಣಲಿಲ್ಲವಂತೆ. ಇದರಿಂದ ನಿರಾಶೆಗೊಂಡ ಪಾರ್ವತಿಯ ಬೇಸರವನ್ನು ತಣಿಸಲೆಂದು ಶಿವನು ತನ್ನ ಜಟೆಯನ್ನು ಬಿಚ್ಚಿ ಒಮ್ಮೆ ಕೊಡವಿದನಂತೆ. ಆ ಜಟೆಯಿಂದ ಉದುರಿದ ನೀರ ಹನಿಗಳು ಭೂಮಿಗೆ ಬಿದ್ದು ಮೊಳೆತು, ಚಂದನೆಯ ಪುಟ್ಟ ಪುಟ್ಟ ಹಳದಿ ಹೂಗಳನ್ನು ಬಿಟ್ಟು ಕಂಗೊಳಿಸಿದವಂತೆ. ಪಾರ್ವತಿ ಈ ಹೂವನ್ನು ಮುಡಿದು ಸಂಭ್ರಮಿಸಿದಳಂತೆ. ಈ ಹಳದಿ ಹೂಗಳೇ ಮುಂದೆ ಸಾಸಿವೆಯಾಗಿ ಪರಿವರ್ತಿತವಾದದ್ದು. ಶಿವನ ಜಟೆಯ ನೀರ ಬಿಂದುಗಳಿಂದ ಉದ್ಭವಿಸಿದ್ದರಿಂದ ಸಾಸಿವೆಯಲ್ಲಿ ನೀರಿನಂಶ ಇರುತ್ತದೆ. ಕಾದ ಎಣ್ಣೆಯಲ್ಲಿ ಬಿದ್ದೊಡನೆ ನೀರು ಹೊರ ಚಿಮ್ಮಿ ಸಿಡಿಯುತ್ತದೆ..ಎಂಬ ನಂಬಿಕೆ ಜನಪದೀಯರದು.

ಸಾಸಿವೆ ಫಸಲಿನ ಎಳೆಯ ಎಲೆಗಳಿಂದ ಉತ್ತರ ಭಾರತೀಯರು ಸೊಗಸಾದ, ರುಚಿಕಟ್ಟಾದ "ಸಾಗು" ಮಾಡುತ್ತಾರೆ. ಮುಸುಕಿನ ಜೋಳದ ರೊಟ್ಟಿ (ಮಕ್ಕಿ ಕಾ ರೋಟಿ) ಜೊತೆಗೆ ಬೆಳ್ಳುಳ್ಳಿ ಘಮಲಿನ ಒಗ್ಗರಣೆ ಹಾಕಿದ

(ತಡಕಾ) ಸಾಸಿವೆ ಎಲೆಯ ಸಾಗು ತಿನ್ನುತ್ತಿದ್ದರೆ, ಆ ಚುಮುಚುಮು ಚಳಿಯಲ್ಲಿ ಎಂಥದ್ದೋ ಹಿತ!

ಇನ್ನು ಸಾಸಿವೆ ಹೂಗಳನ್ನು ಬಾಡಿಸಿ, ಕೆಂಪು ಮೆಣಸಿನಕಾಯಿ ಜೊತೆ ಸೇರಿಸಿ ಚಟ್ನಿಯನ್ನೂ ಮಾಡುತ್ತಾರೆ. ಸಾಸಿವೆ ಗಿಡದ ಬೇರನ್ನು ನೀರಲ್ಲಿ ಕುದಿಸಿ ತೆಗೆದು ಈ ನೀರನ್ನು ಶೋಧಿಸಿ, ಇದರಲ್ಲಿ ಗೋಧಿ ಹಿಟ್ಟು ಕಲೆಸಿ ಕೈಯಲ್ಲೇ ತಟ್ಟಿ ರೋಟಿ ಮಾಡಿ ತಿನ್ನುತ್ತಾರೆ. ಸಾಸಿವೆ ಬೆಳೆ ಬೆಳೆದಾಗ ಅದರ ಭರಪೂರ ಉಪಯೋಗ ಪಡೆಯುವುದು ಇಲ್ಲಿನವರ ವಾಡಿಕೆ.

ಸಾಸಿವೆ ಹೊಲದಲ್ಲಿ ಪುಟ್ಟ ಮಕ್ಕಳನ್ನು ಓಡಾಡಿಸಿದರೆ ಅವರಿಗೆ ಶೀತ, ನೆಗಡಿ ಆಗುವುದಿಲ್ಲ ಎಂಬ ನಂಬಿಕೆಯೂ ಉಂಟು. ಬಿಳಿ ಸಾಸಿವೆಯನ್ನು ದೃಷ್ಟಿ ದೋಷ ನಿವಾರಣೆಗೂ ಬಳಸುತ್ತಾರೆ, ಮಾಟ ಮದ್ದು ಮೊದಲಾದ ತಾಂತ್ರಿಕ ವಿದ್ಯೆಯಲ್ಲೂ ಬಳಸುತ್ತಾರೆ.

ಇನ್ನು ಸಾಸಿವೆ ಎಣ್ಣೆ ಇಲ್ಲಿನವರ ಬದುಕಿನ ಅವಿಭಾಜ್ಯ ಅಂಗ. ಅಡುಗೆಯಿಂದ ಹಿಡಿದು, ಅಲಂಕಾರದವರೆಗೂ ಸಾಸಿವೆ ಎಣ್ಣೆಯದೇ ಪಾತ್ರ. ಕರಿವ, ಹುರಿವ ಪದಾರ್ಥಗಳಿಗೆ ಸಾಸಿವೆ ಎಣ್ಣೆ ಮುಖ್ಯ. ಇನ್ನು ವರ್ಷಾನುಗಟ್ಟಲೇ ಬಳಕೆಗೆ ಬರುವಂತೆ ಹಾಕಿಡುವ ತರಹೇವಾರಿ ಉಪ್ಪಿನಕಾಯಿಗಳಿಗೆ ಸಾಸಿವೆ ಎಣ್ಣೆ ಕಾಸಿ ಸುರಿದರೆ ಆಯ್ತು..ಆ ಉಪ್ಪಿನಕಾಯಿಯ ರುಚಿಯೇ ರುಚಿ!

ನಮ್ಮಲ್ಲಿ ಹರಳೆಣ್ಣೆ ತಲೆಗೆ ಮೆತ್ತಿ ಎಣ್ಣೆ ನೀರು ಹಾಕುವಂತೆ ಇಲ್ಲಿ ಸಾಸಿವೆ ಎಣ್ಣೆಯನ್ನು ತಲೆಗೆ, ಮೈಗೆ ಹಚ್ಚಿ ಮಕ್ಕಳಿಗೂ, ಬಾಣಂತಿಯರಿಗೂ ತಲೆ ಸ್ನಾನ ಮಾಡಿಸುತ್ತಾರೆ. ಚಳಿಗಾಲದಲ್ಲಿ ವೃದ್ಧರಿಗೆ ಕಾಡುವ ಸಂಧು ನೋವು, ನರ ತೊಡಕು, ಚರ್ಮ ಬಿರುಕು ಬಿಡುವಿಕೆ ಮೊದಲಾದ ಸಮಸ್ಯೆಗೂ ಸಾಸಿವೆ ಎಣ್ಣೆ ಬೇಕೇ ಬೇಕು. ನವಜಾತ ಶಿಶುವಿನ ತಲೆಯ ಆಕಾರ ಮಟ್ಟಸವಾಗಿ ಆಗಲು ಸಾಸಿವೆ ಕಾಳು, ಬೂರಾ ಹತ್ತಿಯನ್ನು ತುಂಬಿ ಹೊಲೆದ ಪುಟ್ಟ ದಿಂಬನ್ನು ಬಳಸುವುದನ್ನು ನೋಡಿದ್ದೇನೆ.

ಇನ್ನು ಸಾಮಾನ್ಯ ರೋಗವಾದ ನೆಗಡಿ, ಶೀತ, ಕೆಮ್ಮು, ನಿರಂತರ ಮೂಗು ಸೋರುವಿಕೆ... ಇವುಗಳಿಗೂ ಸಾಸಿವೆ ಎಣ್ಣೆಯಲ್ಲಿ ಅರಿಶಿಣ ಬೆರೆಸಿ ಕಾಯಿಸಿ ಎದೆ, ಕುತ್ತಿಗೆ, ಹಣೆ, ಬೆನ್ನಿಗೆ ಸವರುವುದೂ ಉಂಟು. ಕೆಲವು ಕ್ಷುದ್ರ ದೇವತೆಗಳಿಗೆ ಇಲ್ಲಿನ ಜನ ಬಿಳಿ ಸಾಸಿವೆಯನ್ನು ನೀರಲ್ಲಿ ನೆನೆಸಿ ತೆಗೆದು ಅರಳಿ ಮರದೆಲೆಯಲ್ಲಿ 'ಎಡೆ'ಯಾಗಿ ಇಡುತ್ತಾರೆ. ಹೀಗೆ ಮಾಡುವುದರಿಂದ ಮಾರಿ, ಮಸಣಿ ಮೊದಲಾದ ಕ್ಷುದ್ರ ದೇವತೆಯರು ಜನಗಳಿಗೆ ಕಾಟ ಕೊಡದೇ ಶಾಂತವಾಗಿ ಇರುತ್ತಾರೆ ಎಂಬ ನಂಬಿಕೆ.

ಅಂತೆಯೇ ಬಾಣಂತಿ ಕೋಣೆಯ ಮೂಲೆಯಲ್ಲಿ ಹಳದಿ ವಸ್ತ್ರದಲ್ಲಿ ಹಳದಿ ಸಾಸುವೆ ಕಾಳನ್ನು ಕಟ್ಟಿ ಇಡುವ

ರೂಢಿಯೂ ಉತ್ತರಾಖಂಡದ ಘಟ್ಟ ಪ್ರದೇಶದ ಜನಗಳಲ್ಲಿ ಇದೆ. ಸಾಸಿವೆ ಹುಡಿಯನ್ನು ಬೆಂಕಿಗೆ

ಹಾಕಿ ಸಾಂಬ್ರಾಣಿ ಹೊಗೆಯಂತೆ ಹೊಗೆ ಎಬ್ಬಿಸಿ ದುಷ್ಟ ಶಕ್ತಿಗಳನ್ನು ಓಡಿಸುವುದೂ ಇವರ ನಂಬಿಕೆಗಳಲ್ಲೊಂದು.

ಈ ಎಲ್ಲಾ ಆಚರಣೆಗಳೂ ಉತ್ತರ ಭಾರತೀಯರಲ್ಲಿ ಮಾತ್ರ ಕಂಡು ಬರುತ್ತದೆಯೇ ಹೊರತು, ದಕ್ಷಿಣ ಭಾರತೀಯರಲ್ಲಿ ಇಲ್ಲ. ನಮ್ಮಲ್ಲಿ ಸಾಸಿವೆ ಒಂದು ಸಾಂಬಾರು ದಿನಸು ಅಷ್ಟೆ. ಅದೊಂದು 'ಪುಟ್ಟ ಕಾಳು'. ಎಲ್ಲಕ್ಕೂ ಮುಖ್ಯವಾಗಿ ಇಂಗು, ತೆಂಗಿನ ಒಗ್ಗರಣೆಯಲ್ಲಿ ಕಪ್ಪು ವರ್ಣದ ಸಾಸಿವೆ ಕಾಳು ಬೇಕೇ ಬೇಕು. ರುಚಿಕಟ್ಟಾದ ಸಾರು,ಹುಳಿ, ಕೂಟು, ತಂಬುಳಿಗಳಿಗೂ, ತರತರದ ಚಟ್ನಿ, ಮೇಲೋಗರಗಳಿಗೂ, ಹುಳಿ, ಒಗರಿನ ಮಿಶ್ರಣವಿರುವ ಅನೇಕ ಅನ್ನದ ಅಡುಗೆಗಳಿಗೂ ಸಾಸಿವೆ ಮೇಲೆ ಎದ್ದು ಕಾಣುವಂತಹ ಒಂದು ಒಗ್ಗರಣೆ ಬೇಕೇ ಬೇಕು. ಇನ್ನುಳಿದಂತೆ ಸಾಸಿವೆಗೆ ನಮ್ಮಲ್ಲಿ ಅಷ್ಟು ಪ್ರಾಮುಖ್ಯತೆ ಇಲ್ಲವೆಂದರೂ ಸರಿಯೇ.

"ಪ್ರಾಸವಿಲ್ಲದ ಪದವ
ತಾಸು ಹಾಡಿದರೇನು?
ಸಾಸಿವೆ ಎಣ್ಣೆ ಹದಮಾಡಿ,
ಕಣ್ಣಿಂಗೆ ಪೂಸಿಕೊಂಡಂತೆ ಸರ್ವಜ್ಞ"

ಎನ್ನುವಂತೆ, ಸಾಸಿವೆ ಎಷ್ಟಕ್ಕೆ ಬೇಕೋ, ಅಷ್ಟಕ್ಕೇ ಮಾತ್ರ ಅದರ ಬಳಕೆ ನಮ್ಮಲ್ಲಿ ಸೀಮಿತ. ಇನ್ನು ಸಾಸಿವೆ ಎಣ್ಣೆಯಂತೂ ನಮ್ಮ ದಕ್ಷಿಣ ಭಾರತೀಯರಿಗೆ ಅಷ್ಟಕ್ಕಷ್ಟೇ. ಇಷ್ಟಕ್ಕೂ ಈಗ್ಯಾಕೆ ಈ "ಸಾಸಿವೆ ಪುರಾಣ" ಅಂತೀರೋ? ರೈಲಿನಲ್ಲಿ ಬರುತ್ತಿರುವಾಗ ದಾರಿಗುಂಟ ಕಣ್ಸೆಳೆದ ಸಾಸಿವೆ ಹೊಲಗಳ ಅಂದವನ್ನು ಕಂಡು ಇದೆಲ್ಲಾ ನೆನಪಾಯಿತು,

ಹಂಚಿಕೊಳ್ಳಬೇಕು ಎನಿಸಿತು. ಸಾಸಿವೆ ಚಿಕ್ಕದಾದರೂ ಅದರ ಮಹತ್ವ, ಬಹುತ್ವ ಬಹು ದೊಡ್ಡದು. ಥೇಟ್ ನಮ್ಮ ಹಂಪೆಯ "ಸಾಸಿವೆ ಕಾಳು ಗಣಪತಿ"ಯ ಹಾಗೆ!!!!

-o-



## ಪುಸ್ತಕ ವಿಮರ್ಶೆ

-ಮಾಧವಿ ಹೆಬ್ಬಾರ್

ಪುಸ್ತಕದ ಹೆಸರು :- ಸಾಸಿವೆ ತಂದವಳು
ಲೇಖಕಿ :- ಭಾರತಿ ಬಿ.ವಿ
ಪ್ರಕಾಶಕರು :- ಅಲಂಪು ಪ್ರಕಾಶನ

ಸಾಸಿವೆ ತಂದವಳು ಎಲ್ಲಾ ಕೃತಿಯಂತಲ್ಲಾ....!! ಇದೊಂದು ವಿಭಿನ್ನ ಕೃತಿ. ಸಣ್ಣ ಪುಟ್ಟ ಖಾಯಿಲೆ ಬಂದರೆ ಹೆದರಿ ಡಾಕ್ಟರ್ ಬಳಿ ಓಡುವ ಭಾರತಿಯವರು ಕ್ಯಾನ್ಸರ್ ಕಾಲಿಡುವಷ್ಟರಲ್ಲಿ ಪರೀಕ್ಷೆ ಮಾಡಿಕೊಳ್ಳುವುದನ್ನು ಬಿಟ್ಟಿದ್ದರು ...!!!. ಇಲ್ಲೊಂದು ನಾವು ಗಮನಿಸಬೇಕು ಡಾಕ್ಟರ್ ಅಂದರೆ ಹೇಗಿರಬೇಕು...??. ಒಬ್ಬ ರೋಗಿಯ ಅನಾರೋಗ್ಯವನ್ನು ಗುರುತಿಸಿ ಅದಕ್ಕೆ ಸರಿಯಾದ ಚಿಕಿತ್ಸೆಯನ್ನು ಕೊಡಬೇಕು.... ಮನೋಸ್ಥೈರ್ಯ ಕುಗ್ಗಿಸಿ ನಾಳೆ ಸಾಯುವವರನ್ನು ಇಂದೇ ನೀನು ಸಾಯುತ್ತೀಯಾ ಅಂತ ಹೆದರಿಸುವಂತಿರಬಾರದು..!!!. ಲೇಖಕಿ ಒಬ್ಬ ಲೇಡಿ ಡಾಕ್ಟರ್ ಬಳಿ ಸ್ತನದಲ್ಲಿ ಆಗಿದ್ದ ಗಡ್ಡೆಯನ್ನು ತೋರಿಸಲು ಹೋದಾಗ ಒಮ್ಮೆಲೆ ಇದು "ಕ್ಯಾನ್ಸರ್ ... ನಿಮಗೆಲ್ಲಾ ಬುದ್ಧಿಯೇ ಇಲ್ಲ .... ಇಲ್ಲ ಕೈಮೀರಿದ ಪರಿಸ್ಥಿತಿ ಬಂದಾಗ ಬರ್ತೀರಾ.... ಈಗ ಬಂದು ಪ್ರಾಣ ತಿನ್ನುವುದು... ಎಂದು ಹೇಳುವವರೊಬ್ಬರಾದರೆ... ಮಗದೊಬ್ಬರ ಬಳಿ ಹೋದಾಗ "ನಾನು ಬದುಕುತ್ತೀನಾ??? ಇಲ್ವಾ ಅಂತ...?" ಎಂದು ಕೇಳಿದಾಗ "ನಿಮಗೆ ಏನು ಆಗಲ್ಲ ಇದೊಂದು ಸಣ್ಣ ಆಪರೇಷನ್ "ಮಾಡಿ ಕ್ಯಾನ್ಸರ್ ಗಡ್ಡೆಯನ್ನು ತೆಗೆದು ಒಂದಷ್ಟು ಟ್ರೀಟ್ಮೆಂಟ್ ಕೊಟ್ಟರೆ ನೀವು ಮೊದಲಿನಂತೆ ಆಗ್ತೀರಾ.... ಈ ಒಂದು ವರ್ಷ ಮರೆತು ಬಿಡಿ ... ಆನಂತರದ ನೆಮ್ಮದಿಯ ನಿಮ್ಮ ಜೀವನ ನಿಮ್ಮದೇ..." ಎಂದು ಹಲವರ ಬಾಳಿಗೆ ಸಂಜೀವಿನಿಯಾದ ಡಾ. ಶ್ರೀನಾಥ್ ಹೇಳುವರು!!. ಇಬ್ಬರೂ ಡಾಕ್ಟರ್ ಇಬ್ಬರ ಹೇಳಿಕೆಗೂ ಎಷ್ಟೊಂದು ಅಜಗಜಾಂತರ ವ್ಯತ್ಯಾಸ???!!!. "ಇದನ್ನು ಓದಿದಾಗ ನನಗನ್ನಿಸಿದ್ದು ಡಾಕ್ಟರ್'ಗೆ ಎಷ್ಟು ಜನ ಪೇಷಂಟ್ ಬೇಕು ಅದಕ್ಕಿಂತ ಜಾಸ್ತಿ ಪೇಷನ್ಸ್ ಬೇಕು ಅಂತ...".

ಒಬ್ಬ ಕಾಯಿಲೆಯ ಮನುಷ್ಯನಿಗೆ ಮನೆಯವರ ಸಪೋರ್ಟ್ ಎಷ್ಟು ಮುಖ್ಯ ಅಂತ ಗೊತ್ತಾಗುವುದೇ ಕಾಯಿಲೆ ಬಂದಾಗ!!!!. ಆಪರೇಶನ್ ನಂತರ ಇಲ್ಲದ ನಿದ್ದೆ.... ಅಸಹನೀಯ ಎನಿಸುವ ನೋವು, ಕುಡಿದ ಒಂದು ಲೋಟ ನೀರನ್ನು ತೊಳೆಲಾರದ ಅಂತಹ ಪರಿಸ್ಥಿತಿ... ಇಂತಹ ನೋವಿನಲ್ಲಿಯೂ ಸ್ವಲ್ಪ ದಿನ ಕಳೆದ ಲೇಖಕಿಯ ಎಲ್ಲೋ ಅಡಗಿದ್ದ ಅದಮ್ಯ ಉತ್ಸಾಹ ಅವರನ್ನು ಹಾಗೆಯೇ ಮಲಗಿರುವಂತೆ ಮಾಡಲಿಲ್ಲ!!! ಹಾಕಿದ್ದ ಡ್ರೈನ್ ಪೈಪ್ ಹಿಡಿದೆ ತನ್ನ ಸ್ನೇಹಿತೆಯ ಮನೆಗೆ ಒಬ್ಬಂಟಿಯಾಗಿ ಹೊರಡುತ್ತಾರೆ...!!!. ಆಟೋದವ ಅತ್ಯಾಶ್ಚರ್ಯಗೊಂಡ ಇವರ ಬಂಡ ಹುಂಬ ಧೈರ್ಯಕ್ಕೆ. ಆಟೋದವರಲ್ಲಿ ಮಾನವೀಯತೆ ಇತ್ತೀಚಿಗೆ ಮರೆತಿದ್ದಾರೆ ಅನ್ನೋ ಅಪವಾದಕ್ಕೆ ಗುರಿಯಾಗಿದ್ದಾರಲ್ಲಾ...???!!!. ಆದರೆ ಈ ಆಟೋದವರು ಇವರನ್ನು ಕೂದಲು ಕೊಂಕದಂತೆ ಮನೆಗೆ ತಲುಪಿಸಿದ್ದಾರೆ. ಅವರಿಗೆಲ್ಲಾ ಕೃತಜ್ಞತೆ ತೋರಿಸುವ ಲೇಖಕಿಯ ಹೃದಯವೈಶಾಲ್ಯ ತಿಳಿಯುತ್ತದೆ.

ಸಾವಿಗೂ ಬದುಕಿಗೂ ಎಷ್ಟು ಅಂತರ ಅಂತ ಯಾರಿಗೂ ಗೊತ್ತಿರಲ್ಲ. ಇದು ನಮ್ಮ ಒಳ್ಳೆಯದಕ್ಕೆ... ಗೊತ್ತಾದರೆ ಎಷ್ಟೆಲ್ಲ ಕೆಲಸ ಕಾರ್ಯಕ್ಕಾಗಿ ಮನಸ್ಸು ಮರುಗಬಹುದು...???. ಇಂದೇ ಸಾಯಬಹುದು ನಾಳೆ ಸಾಯಬಹುದು ಮನಸ್ಸಿನಲ್ಲಿ ಭಯ ಇಟ್ಟುಕೊಂಡು ಡಾಕ್ಟರ್ ಬಳಿ ಹೋದಾಗ ಲೇಖಕಿ ಕೇಳೋದು ನಾನು ಯಾವತ್ತು ಸಾಯ್ತಿನಿ...???. ಬೇಗ ಹೇಳಿ ನನಗೆ ಒಂದಿಷ್ಟು ಬರೆಯೋದಿದೆ... ಸುತ್ತೋದಿದೆ ಎಲ್ಲ ಬೇಗ ಮುಗಿಸಿ ಬಿಡ್ತೀನಿ .... ಅವರ ಅವಸರಕ್ಕೆ ಬ್ರೇಕ್ ಹಾಕಿದ ಡಾಕ್ಟರ್ ಸ್ಪೀಡ್ನಲ್ಲಿ ಹೋಗಮ್ಮ ನೀನು ಇನ್ನೂ ಬಹಳಷ್ಟು ವರ್ಷ ಬದುಕಿರುತ್ತೀಯಾ ಅಂತ ಹೇಳಿದ್ದಾಗ ಇಷ್ಟ ಮನಸ್ಸು ನಿರಾಳ ಆಗುತ್ತೆ ಅಲ್ವಾ.....




ಇಂತಹ ಕಾಯಿಲೆಗೆ ತಾಳ್ಮೆ ಬಹಳ ಮುಖ್ಯ. ಕೇವಲ ಇಂಥ ಕಾಯಿಲೆಗೆ ತಾಳ್ಮೆ ಮಾತ್ರವಾ ಅಂತ ಒಂದು ಕ್ಷಣ ಅನಿಸಿದ್ದು ಮಾತ್ರ ಸತ್ಯ ..... ಅದು ಯಾಕೆ ಅಂತ ಅರ್ಥ ಆಗೋದು ಕೀಮೋಥೆರಪಿ ರಡಿಯೇಶನ್ ಥೆರಪಿ ಇದೆಲ್ಲ ತೆಗೆದುಕೊಳ್ಳುವಾಗ ಬೇಕಾಗುತ್ತದೆ. ಮನೆಯವರ ಸಹಕಾರ ಸುತ್ತಮುತ್ತಲಿನವರ ಪ್ರಾಮುಖ್ಯತೆ ಎಷ್ಟು ವಹಿಸುತ್ತದೆ ಗೊತ್ತಾ.....??. ಧೈರ್ಯ ತುಂಬಿದವರು ಕೆಲವು ಗೆಳತಿಯರಾದರೆ, ಇನ್ನು ಕೆಲವರು ನೆಪಕ್ಕಷ್ಟೇ ಮಾತನಾಡಿಸಿದರು ಒಂದಷ್ಟು ಜನರು, ಮಾತನಾಡಿಸಿದರೆ ತಮಗೆ ಕ್ಯಾನ್ಸರ್ ಬಂದು ಬಿಡುತ್ತದೆ ಎಂಬ ಭ್ರಮೆಯಲ್ಲಿ ಮಾತನಾಡಿಸದೆ ಇದ್ದವರು ಇದ್ದರು!!!. ಅತ್ಯಾಪ್ತರ ನಿಜ ಮುಖದರ್ಶನ ಕಷ್ಟಕಾಲದಲ್ಲಿ ಅನ್ನೋದು ಸುಳ್ಳಲ್ಲ. ಬಾಲ್ಯದ, ಅದೆಷ್ಟೊ ವರ್ಷ ಜೊತೆಗಿದ್ದ ಸ್ನೇಹಿತರು ಕೈ ಕೊಟ್ಟರು....!!!!.

ದಮಯಂತಿಯ ನಳಪಾಕ ಅಲ್ಲಲ್ಲಾ ನಳಿನಿಪಾಕ ಓದಿದರಂತೂ ಹೊಟ್ಟೆ ಹುಣ್ಣಾಗುವಷ್ಟು ನಗು ಬರುತ್ತದೆ... ಅಡುಗೆಮನೆಯ ಗಂಧಗಾಳಿ ಗೊತ್ತಿಲ್ಲದ ದಮಯಂತಿ ಅವರ ಮನೆಗೆ ಅಡುಗೆಯವಳಾಗಿ ಕಾಲಿಟ್ಟು ಮಾಡುವ ಅಡುಗೆಯ ಹೀಗೆ ಸಹ ಇರುತ್ತದೆ ಅಂತ ತೋರಿಸಿದ ಪುಣ್ಯಾತಿಗಿತ್ತಿ. ರವೆ ಹುರಿದು ಉಪ್ಪಿಟ್ಟು ಮಾಡಬೇಕು ಅಂತ ಗೊತ್ತಿಲ್ಲದವಳು.... ಸಾರಿನಪುಡಿ ಕೊಟ್ಟರು ಸಾರು ಮಾಡಲು ಬರದವಳು..... ಅನ್ನಕ್ಕೆ ಅಕ್ಕಿ ಅಲ್ಲಲ್ಲ ಅಕ್ಕಿಗೆ ಎಷ್ಟು ನೀರು ಹಾಕಬೇಕು ಅಂತ ಗೊತ್ತಿತ್ತೇನೊ ಅವರ ಪುಣ್ಯಕ್ಕೆ..... ದಮಯಂತಿಯ ಆಗಮನದ ಮೊದಲು ಹೆಂಡತಿಯ ಮಾಡಿದ ಅಡುಗೆ ಹೊಗಳದೆ ಹೆಂಗಸರೆಲ್ಲಾ ಅಡುಗೆ ಚೆನ್ನಾಗಿ ಮಾಡ್ತಾರೆ ಅದರಲ್ಲೇನು ವಿಶೇಷ ಅನ್ನುತಿದ್ದವರಿಗೆ ದಮಯಂತಿಯಿಂದಾಗಿ ಲೇಖಕಿಯವರ ಪತಿಗೆ "ಹೆಂಗಸರೆಲ್ಲರಿಗೂ ಅಡುಗೆ ಬರಲ್ಲ ಅನ್ನುವ ಸಾಕ್ಷಾತ್ಕಾರವಾಯಿತು"!!. ಪುಣ್ಯಕ್ಕೆ ನನ್ನ ಗಂಡ ಆಗಿಗಾದರೂ ಮಾಡಿದ್ದು ಚೆನ್ನಾಗಿದೆ ಅಂತ ಹೊಗಳುತ್ತಾರೆ..... ಅದು ಕೆಲವೊಮ್ಮೆ ಹತ್ತಿಪ್ಪತ್ತು ಸಲ ಕೇಳಿದ ಮೇಲೆ..... ದಮಯಂತಿಯವರು ತುಂಬಾನೆ ಒಳ್ಳೆಯವರು ಒಂದು ದಿನವೂ ಲೇಖಕಿಯವರಿಗೆ ನೋವಾಗುವಂತೆ ಅವರ ಅನಾರೋಗ್ಯದ ಪ್ರಶ್ನೆ ಮಾಡಿರಲಿಲ್ಲ.... ಅದರಲ್ಲೂ ಕಿಮೋಥರಪಿಯಿಂದಾಗಿ ಕೂದಲು ಉದುರಿದಾಗಲೂ ಸಹ... ಇಂಥವರು ಸಿಗುವುದು ಅಪರೂಪವೇ...!!!.

ಭಾರತೀಯವರ ಕೆಲವು ಗೆಳೆಯ-ಗೆಳತಿಯರು ಅವರನ್ನು ಯಾವತ್ತೂ ಒಬ್ಬ ರೋಗಿಯಂತೆ ಕಂಡೇ ಇರಲಿಲ್ಲ. ಅವರೊಂದಿಗಿನ ಮಾತುಕತೆಯ ಹರಟೆ, ಸುತ್ತಾಟ ಎಲ್ಲವೂ ಮಾಮೂಲಿಯಂತೆ ಇರುತ್ತಿತ್ತು. ಇದರಿಂದ ಇವರಿಗೆ ತಾನು ರೋಗಿ ಅನ್ನೋದೇ ಮರೆಯುವಂತೆ ಮಾಡುತ್ತಿತ್ತು..... ಆತ್ಮಸ್ಥೈರ್ಯ ಕುಗ್ಗಿಸುವ ನೂರು ನಮ್ಮರಿಗಿಂತ ಒಂದಿಬ್ಬರು ಆತ್ಮಸ್ಥೈರ್ಯ ಕೊಡುವ ನಮ್ಮವರು ನೂರು ಜನ್ಮ ಬದುಕಿದಂತೆ.. ಅನ್ನೊದು ಡಾಕ್ಟರ್ ಶ್ರೀನಾಥ್ ಮತ್ತೆ ಲೇಖಕಿಯರ ಅನುಭವದಿಂದ ತಿಳಿಯುತ್ತದೆ.

ಬಿದ್ದಾಗ ನಗುವವರು ಬೇಡ, ಬಿದ್ದಾಗ
ಕೈಹಿಡಿದು ಎತ್ತುವವರು ಕೆಲವೊಮ್ಮೆ ಬೇಡ...!!!!?. ಬಿದ್ದಾಗ ನಿನ್ನಲ್ಲಿ ಎದ್ದು ನಿಲ್ಲುವ ಸಾಮರ್ಥ್ಯವಿದೆ.... ನಡೆ ಮುಂದೆ ಎನ್ನುವವರು ಬೇಕು..... ಇದನ್ನ ತಿಳಿದರೂ ಸಹ ಕೈ ಹಿಡಿಯುವವರಿಗೆ ಕಾಯುವುದು ನಿಜ ಸಂಗತಿ...!!!.

ಇನ್ನು ಕೆಲವರು ಇರುತ್ತಾರೆ... ಅವರಿಗೇನು ಹಣವುಂಟು ಕ್ಯಾನ್ಸರ್ ಬಂತು ಚಿಕಿತ್ಸೆ ತೆಗೆದುಕೊಂಡರೆ ಕ್ಯಾನ್ಸರ್ ಹೋಯಿತು ಅಂತ ಹಗುರವಾಗಿ ಮಾತನಾಡುವವರು....!!!. ಅಬ್ಬಾ ಜಗತ್ತಿನಲ್ಲಿ ಇಂಥವರು ಇರ್ತಾರೆ ಅಂತ ಗೊತ್ತಿಲ್ಲದ ಸತ್ಯವೇನು ಅಲ್ಲ. ಭಾರತೀಯವರು ಹೇಳುವಂತೆ ದೇವರೇನಾದರೂ ಅವರಿಗೆ ಕೈಯಲ್ಲಿ ಎರಡು ಕೋಟಿ ಮತ್ತೊಂದು ಕೈಯಲ್ಲಿ ಕ್ಯಾನ್ಸರ್ ರೋಗ ಕಟ್ಟು ಇದೆ ಇದನ್ನು ಪರಿಹರಿಕೊಳ್ಳು ಅಂದಾಗಲೇ ಗೊತ್ತಾಗುತ್ತೆ ರೋಗಿಗಳು ಅನುಭವಿಸುವ ಮಾನಸಿಕ ದೈಹಿಕ ವೇದನೆ.... ಅಂದಹಾಗೆ ಅವರಿಗೆ ಕ್ಯಾನ್ಸರ್ ಬರಲಿ ಅಂತ ಬಯಸುವ ಹೀನ ಮನಸ್ಸುಳ್ಳ ವ್ಯಕ್ತಿ ಭಾರತೀಯರು ಅಲ್ಲವೇ ಅಲ್ಲ. ಜಗತ್ತಿನಲ್ಲಿ ಯಾರಿಗೂ ಇಂಥ ಕಾಯಿಲೆ ಬಾರದಿರಲಿ ಅಂತ ಬೇಡಿಕೊಳ್ಳುವವರಲ್ಲಿ ಒಬ್ಬರು. ಕ್ಯಾನ್ಸರ್ ರೋಗಿಗಳು ಕ್ಯಾನ್ಸರ್ ರೋಗಗಳಿಂದಲೂ ಸ್ಥೈರ್ಯ ಮನೋಬಲ ಗಳಿಸುತ್ತಾರಂತೆ... ಇದರಲ್ಲಿ ಲೇಖಕಿಯರು ಹೊರತಾಗಿಲ್ಲ.........

ಈ ಕೃತಿಯ ಬಗ್ಗೆ ಬರೆಯುವುದು ಬಹಳಷ್ಟಿದೆ.... ಅರಿತುಕೊಳ್ಳುವುದು ಬಹಳಷ್ಟು..... ಚಿಕ್ಕಪುಟ್ಟ ನೋವು ಯಾತನೆಗಳಿಗೆ ಇನ್ನೊಬ್ಬರಿಂದ ಸಹಾಯ, ಅನುಕಂಪದ ಮಾತು ನೋಟಗಳನ್ನ ನಿರೀಕ್ಷಿಸುವ ನಮ್ಮಂತವರಿಗೊಂದು ಪಾಠವಿದೆ.... ಆಗದು ಎಂದು ಕೈಕಟ್ಟಿ ಕುಳಿಕೊಳ್ಳದೆ ಜೀವನದ ಇಂಚಿಂಚನ್ನೂ ಸವಿಯುವ ಇವರ ಗಟ್ಟಿತನ ಹಲವರಿಗೆ ಪ್ರೇರಣೆಯಾಗಿದೆ...

ಕೆಲವರು ನಗುವನ್ನು ಅಳುವ ರೀತಿಯಲ್ಲಿ ಹೇಳುವವರು ಇರುತ್ತಾರೆ.... ಜೀವವನ್ನೇ ಹಿಂಡಿ ಹಿಪ್ಪೆ ಮಾಡಿ ಮರುಜನ್ಮ ಪಡೆದ ಇವರು ಅನುಭವಿಸಿರುವ ನೋವನ್ನು ಹಾಸ್ಯದ ಎಳೆಯಲ್ಲಿ ಬರೆದಿದ್ದಾರೆ.... ಬಹುಶಃ ಇದೇ ಕಾರಣಕ್ಕೇನೊ.... ಬರೆದಿರುವ ಪುಸ್ತಕ ಹಲವಾರು ಜನರಿಗೆ ಕ್ಯಾನ್ಸರ್ ವಿರುದ್ಧ ಹೋರಾಡುವ ಸಾಮರ್ಥ್ಯವನ್ನು, ಶಕ್ತಿಯನ್ನೂ ಮನೋಸ್ಥೈರ್ಯವನ್ನು ಹೆಚ್ಚಿಸಿದೆ. ಕ್ಯಾನ್ಸರ್ ಬಂದರೆ ಜೀವನವೇ ಹೋಯಿತು ಅಂದುಕೊಂಳ್ಳುವವರಿಗೆ ಪುಸ್ತಕ ಓದಿದಾಗ ಜೀವನದಲ್ಲಿ ಪ್ರೀತಿ ಹುಟ್ಟುವಂತೆ ಆಗುತ್ತದೆ.

-o-



# ದಯಾಮರಣ

-ಆಶಾ ಎಚ್ ಕೋಟಿಹಾಳ್

ಜಾಲಿಹಳ್ಳಿ ಎಂಬ ಪುಟ್ಟ ಗ್ರಾಮದಲ್ಲಿ ಧರ್ಮಪ್ಪ ಸುಭದ್ರಾ ದಂಪತಿಗಳಿಗೆ ಬಹಳ ವರ್ಷಗಳ ನಂತರ ಒಂದು ಹೆಣ್ಣು ಮಗು ಆಗುತ್ತೆ, ಮಗು ನೋಡಲು ಬೆಣ್ಣೆಯ ಹಾಗೆ ಇರುತ್ತೆ ಮುದ್ದಾದ ಮಗುವಿಗೆ ಚಂದನ ಎಂದು ತುಂಬಾ ಅದ್ದೂರಿಯಾಗಿ ನಾಮಕರಣ ಮಾಡುತ್ತಾರೆ. ಮಗುವಿನ ಆರೈಕೆಯಲ್ಲಿ ದಿನಗಳು ಕಳೆದಿದ್ದು ಗೊತ್ತಾಗುವುದಿಲ್ಲ. ವರ್ಷಗಳು ಕಳೆದು ಮಗುವಿಗೆ ಐದು ವರ್ಷ ತುಂಬಿದಾಗ ಶಾಲೆಗೆ ಸೇರಿಸಲು ಧರ್ಮಪ್ಪ ಹೋಗುತ್ತಾರೆ ಇರುವ ಒಬ್ಬಳೇ ಮಗಳು ಚಂದನಳನ್ನು ಆಂಗ್ಲ ಮಾಧ್ಯಮ ಶಾಲೆಗೆ ದಾಖಲಾತಿ ಮಾಡಿಸಿ ಬರುತ್ತಾರೆ.

ಶಾಲೆಗಳು ಶುರುವಾಗಲೂ ತುಂಬಾ ಸಮಯ ಇರುವುದರಿಂದ ಚಂದನ ಮಕ್ಕಳ ಜತೆ ಆಡುತ್ತಾ ನಲಿಯುತ್ತ ಇರುತ್ತಾಳೆ ತುಂಬಾ ಬುದ್ಧಿವಂತೆ ಒಮ್ಮೆ ಹೇಳಿದರೆ ಸಾಕು ಕಲಿತುಬಿಡುತ್ತಿದ್ದಳು, ಊರವರೆಲ್ಲಾ ಅನ್ನುವರೇ.. ಧರ್ಮಪ್ಪನ ಮಗಳು ಬುದ್ಧಿವಂತೆ ನೋಡಲು ಕಣ್ಣು ಸಾಲದು ಅಷ್ಟು ಚಂದ. ಯಾರ ದೃಷ್ಟಿ ತಾಕತೋ ಏನೋ ಹೀಗೆ ಒಮ್ಮೆ ಚಂದನ ಮಕ್ಕಳ ಜತೆ ಆಡುವಾಗ ಏನಾಯಿತು ಗೊತ್ತಿಲ್ಲ ಆಡುತ್ತಾ ಹಾಗೇ ನೆಲಕ್ಕುರುಳಿದಳು.

ಧರ್ಮಪ್ಪ ಸುಭದ್ರ ಅದೇ ತಕ್ಷಣ ವೈದ್ಯರ ಬಳಿ ಕರೆದೊಯ್ದರೂ, ಅಲ್ಲಿಯ ವೈದ್ಯರೂ ಸಿಟಿಗೆ ಕರೆದುಕೊಂಡು ಹೋಗಿ ಅಂದರು, ಹಾಗೆ ಬೆಂಗಳೂರಿಗೆ ಕರೆತಂದರೂ ಎಲ್ಲಾ ಪರೀಕ್ಷಿಸಿದ ವೈದ್ಯರು ಮಗುವಿಗೆ ಪೋಲಿಯೊ ಕಾಣಿಸಿಕೊಂಡಿದೆ ಎಂದೂ ಹೇಳಿದರು........

ಬಹಳ ವರ್ಷಗಳ ನಂತರ ಹುಟ್ಟಿದ ಮಗಳ ಮೇಲೆ ಬೆಟ್ಟದಷ್ಟು ಕನಸು ಕಂಡಿದ್ದರು, ಮಗಳಿಗಾಗಿ ಸುಭದ್ರ ಬಣ್ಣ ಬಣ್ಣದ ಲಂಗ ಹೊಲಿದು ಜೊತೆಗೆ ಹುಟ್ಟಿದ ಹಬ್ಬಕ್ಕೆ ಹೊಸಗೆಜ್ಜೆಯನ್ನು ತಂದಿದ್ದಳು. ಮಗಳಿಗೆ ಆಟವಾಡಲು ಧರ್ಮಪ್ಪ ಸೈಕಲ್ ಸಹ ತಂದಿದ್ದನು ಒಟ್ಟನಲ್ಲಿ ಐದು ವರ್ಷದ ಚಂದನಳಿಗೆ ಸಾಕಷ್ಟು ಮಾಡಿದ್ದರು ಆದರೆ ವಿಧಿ ಸಹಿಸಲಿಲ್ಲ ಒಂದೂ ಕಡೆ ವರ್ಷಗಳ ನಂತರ ಕೊಟ್ಟ ಮಗುವಿಗೆ ಪೋಲಿಯೋ ಎಂಬ ಜೀವಮಾನ ಕಾಯಿಲೆಗೆ ಒಳಪಡುವಂತೆ ಮಾಡಿದ.

ಚಂದನಳನ್ನು ಹಾಸ್ಪಿಟಲ್ನಿಂದ ಮನೆಗೆ ಕರೆದುಕೊಂಡು ಬಂದು ಹಾಸಿಗೆಯಲ್ಲಿ ಮಲಗಿಸಿದ್ದರು. ಎರಡು ದಿನಗಳ ನಂತರ ಚೇತರಿಸಿಕೊಂಡ ಚಂದನ ಏಳಲು ಹೋಗುವಾಗ ಕೈಕಾಲು ಆಡಿಸಲೂ ಬರುತ್ತಿಲ್ಲ ಒಂದೆ ಬಾರಿಗೆ ಅಘಾತವಾಗಿ ಅಪ್ಪ ಅಮ್ಮನನ್ನು ಕೂಗಿ ಕರೆಯುತ್ತಾಳೆ. ಮಗಳ ಕೂಗಿಗೆ ಬಂದು ನಿಂತಾಗ ಮಗಳ ಪ್ರಶ್ನೆಗೆ ಉತ್ತರಕೊಡಲಾಗದೆ ಮೂಖವೇದನೆ ಅನುಭವಿಸುತ್ತಿದ್ದರು.

ಹೀಗೆ ವರ್ಷಗಳು ಕಳೆದು ಚಂದನ ಸಹ ವಯೋಸಹಜ ಹೆಣ್ಣಾದಳು ಸಂಭ್ರಮ ಪಡುವ ಹಾಗಿಲ್ಲ ಬಿಡುವಹಾಗಿಲ್ಲ, ಇಷ್ಟು ದಿನದವರೆಗೆ ಏನೂ ಅನ್ನಿಸಿಲ್ಲ ಸುಭದ್ರಳಿಗೆ ಮಗಳ ಈಗಿನ ಪರಿಸ್ಥಿತಿಯಲ್ಲಿ ಅವಳಿಗೆ ಹೇಗೆ ಧೈರ್ಯ ತುಂಬುವುದೆಂದೂ ಒದ್ದಾಡಿದಳು ಹೇಗೋ ಮಗಳಿಗೆ ಸಮಾಧಾನ ಮಾಡಿ ಒಳಗೆ ನೋವು ಅನುಭವಿಸುತ್ತಿದ್ದಳು.

ಸುಭದ್ರಳಿಗೆ ವಯೋಸಹಜ ಕಾಯಿಲೆಗಳು ಶುರುವಾಯಿತು. ಇಬ್ಬರಿಗೂ ಚಿಂತೆಯಾಯಿತು ನಮ್ಮ ನಂತರ ಮಗಳ ಗತಿಯೇನು? ದುಡ್ಡು ಆಸ್ತಿ ಇದ್ದರೂ ನಮ್ಮ ಹಾಗೆ ಯಾರೂ ನೋಡಿಕೊಳ್ಳುವುದಿಲ್ಲ! ಕೊನೆಗೆ ಯೋಚಿಸಿ ದಯಾಮರಣದ ತೀರ್ಮಾನಕ್ಕೆ ಬರುತ್ತಾರೆ ಇದೇ ಸರಿಯೆಂದೂ ಬೆಳಿಗ್ಗೆನೇ ವೈದ್ಯರನ್ನು ಭೇಟಿಯಾಗಿ ತಮ್ಮ ಕಷ್ಟವನ್ನೂ ಹೇಳಿಕೊಂಡಾಗ ಯೋಚಿಸಿದ ವೈದ್ಯರು ಸರ್ಕಾರದ ಒಪ್ಪಿಗೆಯನ್ನೂ ತರಲು ಹೇಳುತ್ತಾರೆ, ಕೊನೆಗೆ ವಿಧಿಯಿಲ್ಲದೇ ರಾಜ್ಯಪಾಲರು ಪ್ರಧಾನ ಮಂತ್ರಿ ಎಲ್ಲರನ್ನೂ ಭೇಟಿ ಮಾಡಿ ತಮ್ಮ ಅಸಹಾಯಕ ಪರಿಸ್ಥಿತಿಯನ್ನೂ ತಿಳಿಸಿ ಮನಸಿಲ್ಲದೆ ಒಪ್ಪಿಗೆ ಪತ್ರವನ್ನೂ ತಂದು ವೈದ್ಯರ ಕೈಗೆ ಕೊಟ್ಟು, ಚಂದನಳ ಬಳಿ ಬಂದು ನನ್ನಿಂದ ತಪ್ಪಾಯಿತು ಮಗಳೇ ಎಂದಾಗ ಕ್ಷಮೆ ಬೇಡ ಅಪ್ಪಾ ಸಾವಿರ ಕನಸು ಕಂಡಿದ್ದ ನಿಮಗೆ ನನ್ನಿಂದ ನೋವಾಗಿದೆ ಇಷ್ಟು ವರ್ಷ ಯಾವ ದೇವರ ಸೇವೆಗೂ ಕಡಿಮೆಯಾಗದಂತೆ ನನ್ನ ಸೇವೆ ಮಾಡಿದ್ದೀರಿ, ನಿಮ್ಮಂತ ಹೆತ್ತವರನ್ನು ಪಡೆದ ನಾನು ಧನ್ಯ ನಿಮ್ಮ ನಂತರ ನಾನು ಹೇಗೆ ಜೀವಿಸಲಿ ಹೇಳಿ ನಿಮ್ಮ ಈ ನಿರ್ಧಾರ ತುಂಬಾ ಖುಷಿಯಾಗಿದೆ ಮುಂದಿನ ಜನ್ಮದಲ್ಲಿ ನಾನು ನಿಮ್ಮಿಬ್ಬರಿಗೂ ತಾಯಾಗಿರುವೆಂದು ಹೇಳಿ ಅಮ್ಮ ಮಾಡಿದ ತನ್ನ ಇಷ್ಟವಾದ ತಿಂಡಿಯನ್ನು ಅಮ್ಮನ ಕೈಯಿಂದ ಕಡೆ ತುತ್ತು ತಿನ್ನಿಸಿಕೊಂಡು ಹೊಸ ಬಟ್ಟೆಯನ್ನು ಹಾಕಿ ವೈದ್ಯರ ಬಳಿ ಹೋದಾಗ ಎಲ್ಲಾ ಸಿದ್ಧತೆಗಳನ್ನು ಮಾಡಿರುತ್ತಾರೆ. ಚಂದನಳನ್ನು ನೋಡಿದ ವೈದ್ಯರಿಗೂ ಸಹ ತುಂಬಾ ನೋವು ದುಃಖವಾಗುತ್ತೆ ವಿಧಿ ಇಲ್ಲದೆ ತಮ್ಮ ಕೆಲಸ ಮಾಡಬೇಕಿತ್ತು. ಚಂದನ ತನ್ನ ಸಾವಿಗೂ ನಗುತ್ತಿರುವ ಮುದ್ದು ಮುಖ ನೋಡಿ ಒಳ್ಳೆಯದಾಗಲಿ ಮುಂದಿನ ಜನ್ಮದಲಾದರೂ ಒಳ್ಳೆಯ ಬದುಕು ಸಿಗಲಿ ಎಂದು ಹರಸಿ ಎಲ್ಲರ ಒಪ್ಪಿಗೆ ಮೇರೆಗೆ ಚಂದನಳಿಗೆ ಅಂತಿಮ ವಿದಾಯ ಹೇಳುತ್ತಾರೆ. ಒದ್ದಾಟ ನೋವಿಲ್ಲದೆ ಒಂದು ಇನ್ಜೇಕ್ಷನ್ ನಿಂದ ಚಂದನ ನಗು ನಗುತ್ತಾ ತನ್ನ ಬದುಕಿಂದ ಎಲ್ಲರಿಗೂ ವಿಧಾಯ ಹೇಳುತ್ತಾಳೆ, ಅಂತೂ ಧರ್ಮಪ್ಪ ಮಗಳ ಮುಂದಿನ ಪರಿಸ್ಥಿತಿ ನೆನೆದು, ಹೊರಾಡಿ ಮಗಳಿಗೆ ದಯಾಮರಣ ಕಲ್ಪಿಸುತ್ತಾನೆ. ಧರ್ಮಪ್ಪ ಮೊದಲು ಮಗಳ ಒಪ್ಪಿಗೆ ಪಡೆದೇ ಎಲ್ಲಾ ವ್ಯವಸ್ಥೆ ಮಾಡಿರುತ್ತಾನೆ, ಇದರಿಂದ ಇಬ್ಬರಿಗೂ ನೆಮ್ಮದಿ ಸಿಕ್ಕಿತು.

-೦-

## ಕನಸು

-ಅರ್ಚನ ಸಿ ಎಸ್

ಕಾಣುವೆವು ನಾವೆಲ್ಲ ನೂರಾರು ಕನಸು
ಎಲ್ಲವೂ ಆಗುವುದಿಲ್ಲ ಒಮ್ಮೆಲೆ ನನಸು

ದೇವರ ಮೇಲೆ ಬೇಡ ನಿನ್ನಯ ಮುನಿಸು
ಆತ ತೋರುವ ದಾರಿಯನ್ನೇ ಅನುಸರಿಸು

ಹೆತ್ತವರಿಗಾಗು ನೀ ಒಳ್ಳೆಯ ಕೂಸು
ಅವರ ಮಾತನ್ನು ನೀ ಸದಾ ಪಾಲಿಸು

ನಿನ್ನಂತರಂಗದ ಕೂಗಿಗೆ ತಲೆಬಾಗಿಸು
ಸತ್ಯ ನ್ಯಾಯದ ಬದುಕು ನಿನ್ನದಾಗಿಸು

ನಿನ್ನನ್ನು ಮೊದಲು ನೀ ಪ್ರೀತಿಸು
ಆಗ ಜಗವೆಲ್ಲ ಕಾಣುವುದು ಸೊಗಸು

-o-





## ಕಾದಿರುವೆ

-ಪವಿತ್ರ. ಹೆಚ್.ಆರ್

ಕಾಯುತಿಹೆನು ನೀ ಬರುವ ಹಾದಿಯ
ನಿನ್ನ ಹೆಜ್ಜೆಯ ಸದ್ದಿಗೆ ಕಿವಿಗೊಟ್ಟು
ಬಾಳೆಲ್ಲ ನಾನೇ ನಿನಾಗಿರಲು
ನೀನಿರದ ಬದುಕಲ್ಲಿ ಗೆಲುವೆಲ್ಲದೆ

ಭಾವಗಳು ನೊಂದು ಬಳಲಿದಾಗ
ಎದೆ ತುಂಬ ಪಿಸುಗುಡುತ್ತಿವೆ
ನಿನ್ನೊಲವು ತುಂಬಿದ ಮಧುರ
ನುಡಿಗಳು ಅಂತರಂಗದ ತರಂಗಿಣಿಯಾಗಿ

ನೀ ಮಾತಾಡದೆ ನನ್ನೆಲ್ಲಾ ಭಾವ ಶೂನ್ಯ
ಬರೆಯದೆ ಉಳಿದ ಖಾಲಿ ಹಾಳೆಯಂತೆ
ಒಲವೆಂದರೂ ಬದುಕೆಂದರೂ ಸರಿಯೇ
ನಾ ನಿನ್ನಲ್ಲಿ ಬೆರೆತು ಒಂದಾಗುವೆ ಉಜೇನಾಗಿ

ಬರಬಾರದೆ ಒಮ್ಮೆ ಎಲ್ಲ ಮರೆತು
ನಾ ಕಳೆದು ಹೋಗಬೇಕು
ನಿನ್ನ ಬಾಹುಬಂಧನದ ಅಪ್ಪುಗೆಯಲ್ಲಿ
ಒಲಿದು ಹೃದಯ ಸೇರುವ ನದಿಯಾಗಿ.

-o-

# ಒಂದು ಜ್ಞಾನದ ಬೆಳಕು ; ಮತ್ತೊಂದು ಸತ್ಯದ ಬೆಳದಿಂಗಳು...

-ಹಿರಿಯೂರು ಪ್ರಕಾಶ್

ಒಂದು ಕುಟುಂಬ, ಅಲ್ಲಿ ತಂದೆ ತಾಯಿ ಮಕ್ಕಳು ಹಾಗೂ ವಯಸ್ಸಾದ ಹಿರಿಯರೆಲ್ಲರೂ ಇರುತ್ತಾರೆ. ಮಕ್ಕಳಲ್ಲಿ ಕೆಲವರು ವಿಕಲಚೇತನರೂ, ಅಸಹಾಯಕರೂ ಮತ್ತೇ ಕೆಲವರು ಕಡಿಮೆ ಬುದ್ಧಿಶಕ್ತಿಯುಳ್ಳವರೂ ಆಗಿರುತ್ತಾರೆ ಎಂದಿಟ್ಟುಕೊಳ್ಳಿ.

ಒಟ್ಟು ಕುಟುಂಬದ ಯೋಗಕ್ಷೇಮಕ್ಕಾಗಿ, ಅಲ್ಲಿನ ಸದಸ್ಯರೆಲ್ಲರ ಅಭ್ಯುದಯಕ್ಕಾಗಿ ಹಾಗೂ ಮಕ್ಕಳ ಭವಿಷ್ಯಕ್ಕಾಗಿ ಕೆಲವೊಂದು ವಿಷಯಗಳಲ್ಲಿ ಹಿರಿಯರಲ್ಲಿ ಅಥವಾ ತಂದೆ ತಾಯಿಗಳಲ್ಲೇ ಅನೇಕಸಲ ಭಿನ್ನಾಭಿಪ್ರಾಯಗಳು, ವೈಮನಸ್ಸುಗಳು ಅಥವಾ ಭಿನ್ನ ದನಿಯ ಚರ್ಚೆಗಳು ಆಗುತ್ತಲೇ ಇದ್ದವು. ಆದರೆ ಆ ಎಲ್ಲಾ ಭಿನ್ನಾಭಿಪ್ರಾಯಗಳ ಹಿಂದಿದ್ದ ಐಕ್ಯತ ಉದ್ದೇಶವು ಒಟ್ಟಾರೆ ಕುಟುಂಬದ ಏಳಿಗೆ ಹಾಗೂ ಮಕ್ಕಳ ಉಜ್ವಲ ಭವಿಷ್ಯದತ್ತಲೇ ಕೇಂದ್ರೀಕೃತವಾಗಿದ್ದವು.



ಒಮ್ಮೊಮ್ಮೆ ಯಾವುದೋ ಒಂದು ಮಹತ್ತರ ವಿಚಾರಗಳಲ್ಲಿ ಅಪ್ಪ ತೆಗೆದುಕೊಂಡ ಕೆಲ ತೀರ್ಮಾನಗಳು ಅಮ್ಮನಿಗೆ ಅಥವಾ ಅಜ್ಜನಿಗೆ ಇಷ್ಟವಾಗಿರುವುದಿಲ್ಲ ಅಥವಾ ಅಮ್ಮನ ಕೆಲ ನಿಲುವುಗಳು ಅಪ್ಪನಿಗೆ ಇಷ್ಟವಾಗಿರಲಾರದು.

ಕೆಲವೊಮ್ಮೆ ಅವರಿಬ್ಬರ ನಿರ್ಧಾರಗಳು ಮನೆಯ ಮಕ್ಕಳಿಗೆ ಸಹ್ಯವಾಗಿರಲಾರದು. ಆದರೂ ತಮ್ಮ ವೈಯಕ್ತಿಕ ಅಸಮಾಧಾನಗಳನ್ನು ಬದಿಗೊತ್ತಿ ಒಟ್ಟಾರೆಯಾಗಿ ಎಲ್ಲರ ಹಿತದೃಷ್ಟಿಯಿಂದ ಒಂದು ತೀರ್ಮಾನ ತೆಗೆದುಕೊಂಡು ಸಂಸಾರದ ಬಂಡಿಯನ್ನು ಸರಿದೂಗಿಸಿಕೊಂಡೇ ಬಂದಿರುತ್ತಾರೆ. ಅವರೆಲ್ಲರ ಮೂಲ ಆಶಯವೂ ಸಂಸಾರದ ರಥಚಕ್ರ ಸರಿಯಾದ ಮಾರ್ಗದಲ್ಲಿ ನಡೆಯುವುದೇ ಆಗಿರುತ್ತದೆ.

ಅನೇಕ ಭಿನ್ನಾಭಿಪ್ರಾಯಗಳ ಹೊರತಾಗಿಯೂ ಅವರೆಲ್ಲರ ಒಟ್ಟು ಮಾರ್ಗದರ್ಶನದಿಂದ ಕುಟುಂಬವೂ ಅಭಿವೃದ್ಧಿ ಹೊಂದುತ್ತಾ ಸಾಗುತ್ತದೆ. ಮಕ್ಕಳೂ ಸಹ ಹಿರಿಯರ ಶ್ರಮದ ಫಲದಿಂದಾಗಿ ಉನ್ನತಿ ಹೊಂದುತ್ತಾ ಬರುತ್ತಾರೆ.

ಕುಟುಂಬದ ಅನೇಕ ಸದಸ್ಯರ ನಡುವೆ ವೈಚಾರಿಕ ಭಿನ್ನಾಭಿಪ್ರಾಯಗಳಿದ್ದರೂ ಅವರೆಲ್ಲರ ಉದ್ದೇಶ ತಮ್ಮ ಕುಟುಂಬ ಹಾಗೂ ಪೀಳಿಗೆ ಮುಂದೆ ಏಳಿಗೆ ಹೊಂದುತ್ತಾ ಸುಖವಾಗಿರಲಿ ಎಂಬುದಾಗಿತ್ತು. ಹೀಗಿದ್ದಾಗ, ಕೆಲ ವರ್ಷಗಳ ನಂತರ ಅಪ್ಪ ಅಮ್ಮ ಹಿರಿಯರು ಎಲ್ಲರೂ ತೀರಿಹೋಗುತ್ತಾರೆ. ಅದಾದ ತರುವಾಯ ಈಗ ಮಕ್ಕಳೂ ಸಹಾ ದೊಡ್ಡವರಾಗಿ ತಮ್ಮ ತಂದೆ ತಾಯಿ ಅಜ್ಜ ಅಜ್ಜಿಯರ ದುಡಿಮೆ ಹಾಗೂ ತ್ಯಾಗದ ಶ್ರಮದಿಂದ, ಸಾಕಷ್ಟು ಹಣ, ಆಸ್ತಿ , ವಿದ್ಯೆ, ಬುದ್ಧಿ, ಸಂಸ್ಕಾರ ಪದವಿ ಎಲ್ಲವನ್ನೂ ಪಡೆದುಕೊಂಡು ನೆಮ್ಮದಿಯಿಂದ ಜೀವನ ಸಾಗಿಸುತ್ತಿದ್ದಾರೆ.

ಹೀಗಿರುವಾಗ ಎಷ್ಟೋ ವರ್ಷಗಳ ಹಿಂದೆ ಯಾವುದೋ ಒಂದು ವಿಷಯದಲ್ಲಿ ತನ್ನ ತಂದೆ, ತಾಯಿ ಅಥವಾ ಕುಟುಂಬದ ಯಾವುದೇ ಹಿರಿಯರು ತೆಗೆದುಕೊಂಡಿದ್ದಿರ ಬಹುದಾದ ಕೆಲ ನಿರ್ಧಾರಗಳು ಪ್ರಸ್ತುತ ಕಾಲಘಟ್ಟದಲ್ಲಿ ಅಸಮಂಜಸ ಎಂದು ಇಂದಿನ ಕೆಲವರಿಗೆ ಅನಿಸಬಹುದು. ಅದರಲ್ಲೂ ತಂದೆಯ ಅಂದಿನ ನಿರ್ಧಾರವನ್ನು ಖಂಡಿಸುವ ಮಕ್ಕಳಿದ್ದಿರಬಹುದು ಅಥವಾ ತಾಯಿಯ ಇಲ್ಲವೇ ಮತ್ತಾರೇ ಹಿರಿಯರ ಕೆಲ ನಿರ್ಧಾರಗಳನ್ನು ಮೂರ್ಖತನದ ನಿರ್ಧಾರವೆಂದು ಜರಿದು ಅವರನ್ನು ದ್ವೇಷಿಸುವ ಮಕ್ಕಳೂ ಇರಬಹುದು.

ಅಂದು ಕೆಲವು ವಿಚಾರಗಳ ನಿರ್ಧಾರದಲ್ಲಿ ಹಿರಿಯರಿಬ್ಬರ ನಡುವೆ ಇದ್ದಿರಬಹುದಾದ ಭಿನ್ನಾಭಿಪ್ರಾಯವನ್ನು ವಿಮರ್ಶಿಸುತ್ತಾ ಕೆಲ ಮಕ್ಕಳು ತಾಯಿ ಕಡೆಗೆ ಮತ್ತೆ ಕೆಲ ಮಕ್ಕಳು ತಂದೆ ಪರವಾಗಿ ಇನ್ನೂ ಕೆಲವರು ಅವರ ವಿರುದ್ಧವಾಗಿ ನಿರಂತರವಾಗಿ ಚರ್ಚಿಸುತ್ತಲೇ ಸಾಗುತ್ತಾರೆ.

ಆದರೆ ಅವರ ಅಂದಿನ ನಿರ್ಧಾರದ ಹಿಂದಿನ ಪರಿಸ್ಥಿತಿ, ಸನ್ನಿವೇಶ, ಸಂಧರ್ಭ, ಆಂತರಿಕ ಹಾಗೂ ಬಾಹ್ಯ ಒತ್ತಡ, ಆರ್ಥಿಕ ಸಾಮಾಜಿಕ ಪರಿಸ್ಥಿತಿ ಹಾಗೂ ಮಿತಿಯಲ್ಲಿದ್ದ ಸಂಪನ್ಮೂಲಗಳ ನಡುವೆಯೂ ಅವರಿಗಿದ್ದ ಒಂದೇ ಗುರಿಯನ್ನು ಇಂದಿನವರಾರೂ ಲೆಕ್ಕಕ್ಕೇ ತೆಗೆದುಕೊಳ್ಳದೇ, ಹಿಂದಿನವರು ತಮಗಾಗಿ ಮಾಡಿಟ್ಟುಹೋದ, ಕೂಡಿಟ್ಟು ಹೋದ ಅಪಾರ ಸಂಪತ್ತನ್ನು ಅನುಭವಿಸುತ್ತಲೇ ಇರುತ್ತಾರೆ. ಅದಕ್ಕಾಗಿ ಹಿರಿಯರ ಶ್ರಮವನ್ನು ಸ್ಮರಿಸುವುದನ್ನು ಬಿಟ್ಟು, ಕುಟುಂಬಕ್ಕಾಗಿ ಅವರೆಲ್ಲರೂ ಮಾಡಿದ ತ್ಯಾಗ , ನೀಡಿದ ಕೊಡುಗೆಗಳಿಗಾಗಿ ಕೃತಜ್ಞತೆಯಿಂದ ಇರುವುದನ್ನು ಬಿಟ್ಟು, ಅವರೆಲ್ಲಾ ಗತಿಸಿ ಹಲವಾರು ವರ್ಷಗಳಾದರೂ ಅವರು ಈ ಹಿಂದೆ ತೆಗೆದುಕೊಂಡಿರ ಬಹುದಾದ ಯಾವುದೋ ನಿರ್ಧಾರಗಳ ಬಗೆಗೆ ಇಂದಿನ ಕುಟುಂಬ ಸದಸ್ಯರು ಅತ್ಯುಗ್ರವಾಗಿ ಖಂಡಿಸುತ್ತಾ ಅವರು ಸರಿಯಿರಲಿಲ್ಲ, ಇವರು ಸರಿಯಿರಲಿಲ್ಲ, ಅದು ಹೀಗಿರಬೇಕಿತ್ತು, ಅದು ಹಾಗಿರಬೇಕಿತ್ತು ಎಂದೆಲ್ಲಾ ಕುಟುಂಬಕ್ಕಾಗಿ ಹೋರಾಟ, ತ್ಯಾಗ, ಬಲಿದಾನ ಮಾಡಿದವರನ್ನು ಟೀಕಿಸಿ ಮಾತನಾಡುವುದಿದೆಯಲ್ಲಾ..... ಅದನ್ನು ಏನೆಂದು ಕರೆಯಬೇಕು ??

ಈ ಮೇಲಿನ ಉದಾಹರಣೆಯಲ್ಲಿ ಒಟ್ಟು ಕುಟುಂಬ ಎನ್ನುವುದು ನಮ್ಮ ಭಾರತ ದೇಶವಾದರೆ, ಅಪ್ಪ , ಅಮ್ಮ ಹಿರಿಯರೆಲ್ಲರೂ ನಮ್ಮ ನಾಡಿನ ಅಭ್ಯುದಯಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿ ತ್ಯಾಗ ಮಾಡಿ ಮಡಿದ ಮಹನೀಯರಿದ್ದಂತೆ. ಅವರೆಲ್ಲಾ ಕಷ್ಟಪಟ್ಟು ಗಳಿಸಿಕೊಟ್ಟ ಆಸ್ತಿ, ಸಂಪತ್ತು ಎಂದರೆ ಅದು ಬಹುಮೌಲ್ಯಯುತವಾದ ಸ್ವಾತಂತ್ರ್ಯ. ಅವರೆಲ್ಲರ ಮಧ್ಯೆ ನಾನಾ ವಿಚಾರಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳಿದ್ದರೂ ಒಟ್ಟಾರೆ ಧ್ಯೇಯ ನಾಡಿನ ಸ್ವಾತಂತ್ರ್ಯವೇ ಆಗಿತ್ತು.

ಒಂದು ನಿರ್ದಿಷ್ಟ ಗುರಿಯನ್ನಿಟ್ಟುಕೊಂಡು ಹೋರಾಡುವಾಗ, ವೈವಿಧ್ಯತೆಯಲ್ಲಿ ಏಕತೆಯುಳ್ಳ ಭಾರತದಲ್ಲಿ ಅನೇಕ ವಿಚಾರಗಳ ಬಗೆಗೆ ಕೆಲ ಮುಖಂಡರಲ್ಲಿ ಭಿನ್ನಮತ ಸರ್ವೇ ಸಾಮಾನ್ಯ. ಅಂತಹ ಭಿನ್ನಮತವೆಂಬುದು ಕೇವಲ ತಾವು ಹಿಡಿದ ಹೋರಾಟದ ಹಾದಿಗೆ ಸಂಬಂಧಿಸಿದ್ದೇ ವಿನಃ ವೈಯಕ್ತಿಕ ನೆಲೆಯಲ್ಲಿ ಮೂಡಿದ ದ್ವೇಷ ಸಾಧನೆಯ ಭಿನ್ನತೆಯಲ್ಲ ! ಅದು

ವೈಚಾರಿಕ ಭಿನ್ನಾಭಿಪ್ರಾಯಗಳೇ ವಿನಃ ಮತ್ತೇನೂ ಅಲ್ಲ. ಏಕೆಂದರೆ ಅವರೆಲ್ಲರ ಒಂದೇ ಗುರಿ ಭಾರತವನ್ನು ಬ್ರಿಟಿಷರ ದಾಸ್ಯದಿಂದ ಮುಕ್ತಗೊಳಿಸ ಬೇಕೆಂಬುದು. ಹೀಗಿರುವಾಗ ಹೋರಾಟದ ಹಾದಿಯಲ್ಲಿ ಮೂಡಿದ ಭಿನ್ನ ಧ್ವನಿಗಳನ್ನೇ ಹಿಡಿದು, ಸ್ವಾತಂತ್ರ್ಯಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡಿದ ಮಹನೀಯರ ಬಗೆಗೆ, ಮಹಾತ್ಮರ ಬಗೆಗೆ ತುಚ್ಛವಾಗಿ ಟೀಕಿಸುತ್ತಾ ಕೂರುವುದು ಯಾವ ದೃಷ್ಟಿಯಿಂದ ಸರಿಯೆನಿಸಬಲ್ಲದು ?

ನಾಡಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಮಡಿದ ಈ ಮಹನೀಯರಲ್ಲಿ ಯಾರಾದರೂ ಜನರ ಹೊಟ್ಟೆ ಮೇಲೆ ಹೊಡೆದು ಆಸ್ತಿ ಸಂಪಾದಿಸಿದವರಾಗಲೀ, ಅಧಿಕಾರಕ್ಕಾಗಿ ಸ್ವಾರ್ಥ ಸಾಧನೆಗಾಗಿ ಜಾತಿ ಧರ್ಮಗಳ ಮಧ್ಯೆ ವಿಷಬೀಜ ಬಿತ್ತಿದವರಾಗಲೀ, ಭ್ರಷ್ಟಾಚಾರದ ಹಗರಣಗಳಲ್ಲಿ ಸಿಲುಕಿದವರಾಗಲೀ ಅಥವಾ ಅಧಿಕಾರ ದಾಹಕ್ಕಾಗಿ ಬ್ರಿಟಿಷರೊಂದಿಗೆ ಒಳಒಪ್ಪಂದ ಮಾಡಿಕೊಂಡವರಾಗಲೀ ಇರಲು ಸಾಧ್ಯವೇ..?

ಇಂದು ಈ ಎಲ್ಲಾ ಪಾಪಕೃತ್ಯಗಳನ್ನು ಮಾಡಿದ ರಾಜಕೀಯ ನಾಯಕರನ್ನು ನಾವು ತಲೆ ಮೇಲೆ ಹೊತ್ತು ಮೆರೆಸುತ್ತೇವೆ. ಸಾವಿರಾರು ಕೋಟಿ ಹಣವನ್ನು ಅಕ್ರಮ ಮಾರ್ಗದಿಂದ ಗಳಿಸಿದವರಿಗೂ ನಡುಬಾಗಿ ನಮಿಸುತ್ತೇವೆ. ಅಧಿಕಾರಕ್ಕಾಗಿ ಎಂತಹಾ ಹೀನ ಕೃತ್ಯದಲ್ಲಿ ತೊಡಗಿದ್ದವರನ್ನೂ ಗೌರವಿಸಿ ಜೈಕಾರ ಹಾಕುತ್ತೇವೆ, ಎಲ್ಲಾ ಮರೆತು ಅಧಿಕಾರ ಕೈಗೆ ಕೊಡುತ್ತೇವೆ.

ಆದರೆ ಇನ್ನೂರು ವರ್ಷಗಳಿಂದಲೂ ಬ್ರಿಟಿಷರ ದಾಸ್ಯದ ಸಂಕೋಲೆಗಳಲ್ಲಿ ಸಿಲುಕಿ ನಲುಗಿದ್ದ ಭಾರತಾಂಬೆಯನ್ನು ಬಂಧನದಿಂದ ವಿಮುಕ್ತಿಗೊಳಿಸುವ ಏಕೈಕ ಉದ್ದೇಶದಿಂದ

ಪ್ರಾಣವನ್ನೂ ಲೆಕ್ಕಿಸದೇ ಬದುಕಿನ ಸರ್ವಸ್ವವನ್ನೇ ತ್ಯಾಗ ಮಾಡಿ ಮಡಿದ ಮಹಾತ್ಮರ ಬಗೆಗೆ ಯಾವುದೋ ಒಂದು ಸಂಗತಿಯನ್ನಿಟ್ಟುಕೊಂಡು

ಅತ್ಯಂತ ನೀಚ ಶಬ್ಧಗಳನ್ನು ಬಳಸಿ ಟೀಕಿಸುತ್ತೇವೆ, ಮುಕ್ಕಾಲು ಶತಮಾನದ ಹಿಂದೆ ಗುಂಡೇಟು ತಿಂದು ಮಣ್ಣಲ್ಲಿ ಮಣ್ಣಾಗಿರುವ ದೇಹಕ್ಕೆ ಮತ್ತೆ ಮತ್ತೆ ಗುಂಡುಗಳನ್ನು ಹೊಡೆಯುತ್ತಲೇ ಬಂದಿದ್ದೇವೆ...!!

ಇದು ನಮ್ಮ ಮನಸ್ಥಿತಿ..; ದೇಶದ ಸ್ವಾತಂತ್ರ್ಯಕ್ಕಾಗಿ ನಿಷ್ಠೆಯಿಂದ ಹೋರಾಡಿ ಮಡಿದವರ ದುರ್ಗತಿ !

* ಮರೆಯುವ ಮುನ್ನ *

ಇಂದು ಜಗತ್ತಿನ ಮುಂಚೂಣಿ ರಾಷ್ಟ್ರಗಳ ಸಾಲಿನಲ್ಲಿ ಮಿನುಗುತ್ತಿರುವ ಭಾರತದ ಸಾಧನೆಗೆ ಅಂದು ಅನೇಕ ಮಹನೀಯರು ಮೌಲ್ಯಯುತವಾದ ಕೊಡುಗೆಗಳನ್ನು ನೀಡಿ ಅಸ್ತಿಭಾರ ಹಾಕಿದ್ದರು. ಅವರ ಅಪಾರ ಬುದ್ದಿಶಕ್ತಿ, ದೇಶಪ್ರೇಮ, ಹೋರಾಟದ ಹಾದಿ ಇತ್ಯಾದಿಗಳ ದಾರಿದೀಪವೇ ಇಂದಿನ ಭಾರತಕ್ಕೆ ಆಧಾರ ಸ್ಥಂಭಗಳು. ಅಂತಹಾ ಸ್ಥಂಭಗಳಲ್ಲಿ ಮಹಾತ್ಮಾ ಗಾಂಧೀಜಿ ಹಾಗೂ ಡಾ. ಬಿ.ಆರ್. ಅಂಬೇಡ್ಕರ್ ರವರು ಅಗ್ರಗಣ್ಯರು.

ವಿಪರ್ಯಾಸವೆಂದರೆ ಈ ಇಬ್ಬರು ಮಹನೀಯರ ನಡುವೆ ಅಂದು ಇದ್ದಿರಬಹುದಾದ ಕೆಲ ವೈಚಾರಿಕ ಭಿನ್ನಾಭಿಪ್ರಾಯಗಳನ್ನೇ ಇಂದು ದೊಡ್ಡದು ಮಾಡುತ್ತಾ ಅವರು ಈ ನಾಡಿಗೆ ನೀಡಿದ್ದ ಮಹತ್ತರ ಕೊಡುಗೆಯನ್ನೇ ಪಕ್ಕಕ್ಕೆ ಸರಿಸಿ ಕೇವಲ ಅವರ ಮಧ್ಯೆಯಿದ್ದ ಭಿನ್ನಮತವನ್ನೇ ಮೆರೆಸುವಷ್ಟು ಬುದ್ಧಿವಂತರಾಗಿದ್ದೇವೆ. ಅದರಲ್ಲೂ ಮಹಾತ್ಮ ಗಾಂಧಿಯವರನ್ನು ಒಬ್ಬ ಸ್ವಾರ್ಥಿಯಂತೆ, ವಿಕೃತಿಯಂತೆ, ದೇಶವನ್ನು ಒಡೆದಾಳುವ ಮನಸ್ಥಿತಿಯವನಂತೆ, ಸರ್ವಾಧಿಕಾರಿಯಂತೆ ಬಿಂಬಿಸುತ್ತಿರುವುದನ್ನು ನೋಡಿದರೆ ನಾವು ಯಾಕಾದರೂ ಅಕ್ಷರಗಳನ್ನು ಓದಲು ಕಲಿತೆವೋ ಎನಿಸಿಬಿಡುತ್ತದೆ.

ಸಂಘಟನೆಯ ರೂಪುರೇಷೆ, ಹೋರಾಟದ ವಿಧಾನ, ವರ್ಣಾಶ್ರಮ, ಮತದಾನದ ಹಕ್ಕು, ಮುಂತಾದ ವಿಚಾರಗಳ ಬಗೆಗೆ ಬಾಬಾ ಸಾಹೇಬರು ಹಾಗೂ ಮಹಾತ್ಮರ ನಡುವೆ ವೈಚಾರಿಕ ತರ್ಕಗಳ ಏನೇ ಭಿನ್ನಾಭಿಪ್ರಾಯಗಳಿದ್ದರೂ, ಸ್ವಾತಂತ್ರ್ಯ, ಸಮಾನತೆ, ಸರ್ವಶಿಕ್ಷಣ , ದೇಶಪ್ರೇಮ ಹಾಗೂ ಒಟ್ಟಾರೆ ಜನಕಲ್ಯಾಣದ ಉದ್ದೇಶದ ಒಳನೋಟದಲ್ಲಿ ಅವರ ನಡುವಿನ ಉದ್ದೇಶಗಳಲ್ಲಿ ಸಾಮ್ಯತೆಯಿತ್ತು, ಸ್ಪಷ್ಟತೆಯಿತ್ತು.

ಡಾ. ಅಂಬೇಡ್ಕರ್ ಹಾಗೂ ಮಹಾತ್ಮ ಗಾಂಧಿ ಈ ನಾಡಿಗೆ ದೊರೆತ ಜ್ಞಾನದ ಸೂರ್ಯನ ಬೆಳಕು ಹಾಗೂ ಅಹಿಂಸಾವಾದದ ಚಂದ್ರನ ಬೆಳದಿಂಗಳಿದ್ದಂತೆ. ಡಾ.ಅಂಬೇಡ್ಕರ್ ರವರು ಕೊಟ್ಟ ಪವಿತ್ರ ಸಂವಿಧಾನ ಹಾಗೂ ಗಾಂಧಿಯವರು ತೋರಿದ ಸತ್ಯದ ಹಾದಿಯಂತಹ ಪ್ರಜ್ವಲ ಬೆಳಕಿನ ಮಾರ್ಗದರ್ಶನ

ವಿದ್ದುದರಿಂದಲೇ ಭಾರತವಿಂದು ಪ್ರಕಾಶಿಸುತ್ತಿರುವುದು.




ಹೋರಾಟದ ಹಾದಿಗಳು ಭಿನ್ನವಾದರೂ ಇಂದಿನ ಪೀಳಿಗೆಗಾಗಿ ತಮ್ಮ ಬದುಕನ್ನೇ ಮುಡುಪಾಗಿಟ್ಟು ಸಾರ್ಥಕ ಬದುಕನ್ನು ಕಂಡುಕೊಂಡು ಭಾರತದ ಕಣಕಣದಲ್ಲೂ ಅಮರರಾಗಿರುವ ಇಂತಹಾ ಹಿರಿಯರನ್ನು ಯಾವುದೋ ಸೈದ್ಧಾಂತಿಕ ಕಾರಣಗಳಿಗಾಗಿ ತುಚ್ಛವಾಗಿ ಟೀಕಿಸುವವರಲ್ಲಿ ಒಮ್ಮೆ ಆತ್ಮವಿಮರ್ಶೆ ಮಾಡಿಕೊಳ್ಳುವ ಸದ್ಬುದ್ಧಿ ಮೂಡಲಿ.

ಅರ್ಥಮಾಡಿಕೊಳ್ಳಲು ಇಷ್ಟು ಸಾಕು !

-o-



# ದ್ವೇಷ ಬಿಡು ಸ್ನೇಹ ಕಟ್ಟು

-ಗೀತಾ ಕೈಲ್ಕೆರೆ

ಅನೇಕ ಸಲ ಕಾರಣವೇ ಇಲ್ಲದೆ ಅಥವಾ ಸಣ್ಣ ವಿಷಯಕ್ಕಾಗಿ ಸಂಬಂಧಿಕರುಗಳ, ನೆರೆಹೊರೆಯವರುಗಳ, ಸಹೋದ್ಯೋಗಿಗಳ ಜೊತೆಗೆಲ್ಲ ದ್ವೇಷ ಸಾದಿಸುತ್ತಿರುತ್ತೇವೆ. ಆ ದ್ವೇಷ ಎಷ್ಟರ ಮಟ್ಟಿಗೆ ಇರುತ್ತದೆ ಅಂದ್ರೆ ಸಂಬಂದಿಕರಾದರೆ ಮನೆಯಿಂದ ಆಚೆ ಅಟ್ಟಿಸುವುದು. ಸಹೋದ್ಯೋಗಿಗಳಾದರೆ ಬೇರೆ ಕಡೆ ವರ್ಗಾವಣೆ ಅಥವಾ ಅಮಾನತ್ತು ಮಾಡಿಸುವುದು. ನಂತರ "ನಮ್ಮನ್ನು ಎದುರು ಹಾಕಿಕೊಂಡವರಿಗೆ ಇದೇ ಗತಿ" ಎಂದೆಲ್ಲ ಬೀಗುವುದು. ದೊಡ್ಡವರು ಸಣ್ಣವರ ಮೇಲೆ ಧಣಿಕರು ಬಡವರ ಮೇಲೆ, ಅಧಿಕಾರಿಗಳು ಕಾರ್ಮಿಕರ ಮೇಲೆ ಹೀಗೆ ದ್ವೇಷ ಕಾರುವಂತದ್ದು. ಆದರೆ ಇದರಿಂದ ಯಾವ ಸಾಧನೆಯೂ ಆಗಿರುವುದಿಲ್ಲ. ಬದಲಾಗಿ ನಾವು ನಮಗೆ ಅರಿವಿಲ್ಲದೆ ಅನೇಕ ತೊಂದರೆ ತಾಪತ್ರಯಗಳಿಗೆ ಸಿಕ್ಕಿ ಹಾಕಿಕೊಂಡಿರುತ್ತೇವೆ. ಮಾನಸಿಕ ಹಿಂಸೆ, ಸಾಕಷ್ಟು ಒತ್ತಡ, ಅಪಾಯಗಳಿಗೆ ಒಳಗಾಗಿರುತ್ತೇವೆ. ಇದರ ಪರಿಣಾಮ ನಮ್ಮ ಆರೋಗ್ಯ ಆಯಸ್ಸನ್ನು ನಮಗೆ ಅರಿವಿಲ್ಲದೆ ಕಳೆದುಕೊಳ್ಳುತ್ತಿರುತ್ತೇವೆ. ಹಾಗಾದರೆ ಇದೆಲ್ಲ ಯಾವ ಪುರುಷಾರ್ಥಕ್ಕೆ..?! ಆದ್ದರಿಂದ ಹಣ ಸಂಪತ್ತು, ಜಾತಿ, ಲಿಂಗ,ಧರ್ಮದ ಹೆಸರಿನಲ್ಲಿ ಹುಟ್ಟಿಕೊಳ್ಳುವ ದ್ವೇಷ, ಸೇಡುಭಾವನೆ, ಅಸೂಯೆಗಳನ್ನು ಬಿಟ್ಟು ಬಿಡೋಣ. ಪ್ರೀತಿ ಪ್ರೇಮ ಸಹಬಾಳ್ವೆಯ ಜೀವನ ನಡೆಸೋಣ. ನೆಮ್ಮದಿಯ ಜೀವನ ಸಾಗಿಸೋಣ.

-೦-





# ಗಜಲ್

-ನಾರಾಯಣಸ್ವಾಮಿ (ನಾನಿ) ಮಾಲೂರು

ನೀನು ಪ್ರೀತಿಸಲಿಲ್ಲವೆಂದು ಚಿಂತಿಸಲಿಲ್ಲ ಸಖಿ
ನನ್ನ ದೇಹವನು ಅಮಲೆಂದು ಭಾಧಿಸಲಿಲ್ಲ ಸಖಿ

ಕಾಮದ ದಾಹ ನಿನ್ನನ್ನು ದಾರಿ ತಪ್ಪಿಸಿರಬಹುದು
ಉಕ್ಕುವ ಮೋಹದ ತೀರವೆಂದು ತುಂಬಲಿಲ್ಲ ಸಖಿ

ಕಾರುಣ್ಯದ ಮೈಕಾಂತಿಯು ಕರಗಿ ಹೋಗಬಹುದು
ಕಾವೇರಿದ ದೇಹದ ಸುಖವೆಂದು ತಣಿಯಲಿಲ್ಲ ಸಖಿ

ಮೈಮಾಟದ ಮೋಡಿಗೆ ಮನಸ್ಸು ಮರುಳಾಗಿರಬಹುದು
ದೇಹದ ಬೆವರಿನ ವಾಸನೆ ಎಂದೂ ಘಮಿಸಲಿಲ್ಲ ಸಖಿ

ಪ್ರೀತಿಯ ಹಣತೆ ಸದಾ ಉರಿಯುತಿದೆ ನಾನಿಯ ಎದೆಯೊಳಗೆ
ಭುವಿಯಲಿ ಪ್ರೀತಿಸಿದ ಜೀವಗಳೆಂದು ಒಂದಾಗಲಿಲ್ಲ ಸಖಿ

- ೦ -

# ಪುರುಸೊತ್ತಿಲ್ಲಾರೀ

-ಚಂಪಕ ರಾಘವೇಂದ್ರ

ಅಲ್ವೇ?, ಪ್ರತಿದಿನ ಬೆಳಗ್ಗೆ ತಿಂಡಿಗೆ ಉಪ್ಪಿಟ್ಟೇ ಮಾಡ್ತೀಯಲ್ಲ, ಅಕ್ಕಿರೊಟ್ಟಿನೋ, ದೋಸೆನೋ, ಚಪಾತಿನೋ, ಪೂರಿ ಸಾಗುನೋ ಏನಾದರೂ ಬೇರೆ.. ಬೇರೆ ತಿಂಡಿ ಮಾಡ್ಬಾರ್ದೇನೇ?" ಎಂದ ಪತಿರಾಯ ರಮೇಶ.

ನನಗೇನು ಪ್ರತಿದಿನ ಉಪ್ಪಿಟ್ಟೇ ಮಾಡ್ಬೇಕು ಎನ್ನುವ ಹಠ ಏನೂ ಇಲ್ಲ ಬಿಡ್ರೀ, ನನಗೂ ನನ್ನ ಗಂಡ ಅಂದ್ರೆ ಪ್ರೀತಿ ,ಅಭಿಮಾನ, ಗೌರವ, ಎಲ್ಲವೂ ಇದೆ, ಆದ್ರೇನು ಮಾಡೋದು? ರಾತ್ರಿ ಮಲಗುವಾಗ ತಡವಾಗೋದರಿಂದ ಬೆಳಗ್ಗೆ ಏಳುವಾಗ ಸ್ವಲ್ಪ ತಡವಾಗುತ್ತೆ ಅಷ್ಟೊತ್ತಿಗಾಗಲೇ ನನ್ನ ಅನೇಕ ಗೆಳತಿಯರಿಂದ ಬಂಧುಗಳಿಂದ ಗುಡ್ ಮಾರ್ನಿಂಗ್ ಮೆಸೇಜ್ ಬಂದಿರುತ್ತೆ, ಮೆಸೇಜ್ ನೋಡ್ಕೊಂಡು ಹಾಗೆ ಎದ್ದು ಬರೋಕಾಗುತ್ಯೇ? ನಮಸ್ಕಾರಕ್ಕೆ ಪ್ರತಿ ನಮಸ್ಕಾರ ಮಾಡೋದು ನಮ್ಮ ಧರ್ಮ ಅಲ್ವಾ? ನಮ್ಮ ಹಿರಿಯರು ಕೂಡ ಇದನ್ನೇ ಹೇಳಿದ್ದಲ್ವೇ? ಹಾಗಾಗಿ ಎಲ್ಲರಿಗೂ ಗುಡ್ ಮಾರ್ನಿಂಗ್ ಕಳಿಸಿ ಹಿಂದಿನ ದಿನ ನಾನು ಫೇಸ್ಬುಕ್ ಇನ್ಸ್ಟಾಗ್ರಾಂಗಳಿಗೆ ಹಾಕಿದ ಪೋಸ್ಟ್ ಗೆಲ್ಲಾ ಎಷ್ಟು ಲೈಕ್ ಬಂದಿದೆ ಯಾವ ರೀತಿಯ ಕಾಮೆಂಟ್ ಬಂದಿದೆ ಎಂದು ನೋಡ್ಕೊಂಡು ಕಾಮೆಂಟ್ ಮಾಡಿದವರಿಗೊಂದು ಧನ್ಯವಾದ ತಿಳಿಸಿ ಒಳಗೆ ಅಡುಗೆ ಮನೆಗೆ ಹೋಗುವಾಗ ಯಜಮಾನ್ರು ಆಫೀಸಿಗೆ ಹೊರಡುವ ಸಮಯವಾಗಿಬಿಡುತ್ತೆ, ಆಗ ಉಪ್ಪಿಟ್ಟಲ್ಲದೇ ಬೇರೆ ಇನ್ನೇನು ಮಾಡೋಕಾಗುತ್ತೆ ನೀವೇ ಹೇಳಿ?

ನಮ್ಮ ಪೋಸ್ಟ್ ಗೆ ಲೈಕ್ ಕಾಮೆಂಟ್ ಮಾಡುವವರೇ ನಮಗೊಂದು ತರಹ ದೇವರಿದ್ದಂತೆ, ನಾವು ಅವರಿಗೆ ಧನ್ಯವಾದ ಹೇಳಿಲ್ಲವೆಂದ್ರೆ ಹೇಗೆ? ಮತ್ತೆ ಎಂದೂ ನಮ್ಮ ಪೋಸ್ಟ್ಗಳನ್ನು ಕಣ್ಣೆತ್ತಿಯೂ ನೋಡೋಲ್ಲ, ಯಾರೂ ನೋಡಿಲ್ಲ ಅಂದ್ರೆ ಮತ್ತೆ ನಾವು ಹಾಕುವುದಾದರೂ ಯಾಕೆ ಅಲ್ವಾ? ಕೆಲವರು ಹೇಳ್ತಾರೆ ಯಾರು ನೋಡ್ಲಿ ಬಿಡ್ಲಿ ನಮ್ಮ ಖುಷಿಗೆ ಹಾಕಿಕೊಳ್ಳೋದು ಅಂತ, ಈ ಮಾತನ್ನ ಒಪ್ಪುವುದಕ್ಕೆ ಸಾಧ್ಯವುಂಟೇ ? ಸುಮ್ನೆ ಅವರ ಖುಷಿಗೆ ಅಂತಾಗಿದ್ರೆ ಫೇಸ್ಬುಕ್ನಲ್ಲಾಗಲಿ ಇನ್ಸ್ಟಾಗ್ರಾಂನಲ್ಲಾಗಲಿ ಹಾಕ್ತಾನೆ ಇರಲಿಲ್ಲ,

ಹಾಂ ! ಇನ್ನೊಂದು ವಿಷಯ ಹೇಳೋದನ್ನೆ ಮರೆತುಬಿಟ್ಟೆ ನೋಡಿ ರಾಜಕಾರಣಿಗಳು ಬರ ಅಧ್ಯಯನ ನೆರೆ ಹಾವಳಿ ಎಂದು ಸಂತ್ರಸ್ತರ ಮನೆಗೆ ಹೋಗೋದು ಯಾರಾದರೂ ಗಣ್ಯರು ತೀರಿಕೊಂಡಾಗ ಮೊಸಳೆ ಕಣ್ಣೀರು ಹಾಕೋದಕ್ಕೆ ಹೋಗೋದು ಎಲ್ಲಾ ಯಾಕೆ ಮಾಡ್ತಾರೆ ಹೇಳಿ? ಒಂದಷ್ಟು ಓಟು ನಮಗೇನೆ ಬರಲಿ ಅಧಿಕಾರ ನಮ್ಮ ಕೈಯಲ್ಲಿಯೇ ಉಳಿಯಲಿ ಒಂದಷ್ಟು ಸುದ್ದಿಯಾಗಲಿ ಅಂತ ಅಲ್ವೇ?.

ಹಾಗೆಯೇ ದಿನ ಲೈಕ್ ಕಾಮೆಂಟ್ ಕೊಡುವ ಅಭಿಮಾನಿಗಳನ್ನ ಹಾಗೆಲ್ಲ ಕಳೆದುಕೊಳ್ಳೋಕೆ ಆಗಲ್ಲ ಅವರ ಜೊತೆ ಸಂಪರ್ಕದಲ್ಲಿರಬೇಕಾಗುತ್ತೆ, ಈಗ ಒಂದು ವಿಷಯ ಹೇಳ್ತೀನಿ ಕೇಳಿ,




ನಮ್ಮೆಜಮಾನ್ರು ಹೇಳುವ ಹಾಗೆ ದಿನ ನಾನು ಒಂದೇ ತರಹದ ಉಪ್ಪಿಟ್ಟು ಮಾಡೋಲ್ಲ ಕಣ್ರೀ ಒಂದೊಂದು ದಿನ ಒಂದೊಂದು ಉಪ್ಪಿಟ್ಟು ಮಾಡ್ತೀನಿ, ಒಂದು ದಿನ ಅಕ್ಕಿರವೆ ಉಪ್ಪಿಟ್ಟು ಮಾಡಿದ್ರೆ ಮರುದಿನ ಗೋಧಿರವೆ ಉಪ್ಪಿಟ್ಟು ,ಇನ್ನೊಂದು ದಿನ ಶ್ಯಾವಿಗೆ ಉಪ್ಪಿಟ್ಟು ದೋಸೆ ಉಪ್ಪಿಟ್ಟು ಚಪಾತಿ ಉಪ್ಪಿಟ್ಟು ಇಡ್ಲಿ ಉಪ್ಪಿಟ್ಟು ಎಲ್ಲಾನು ಮಾಡ್ತೀನಿ, ಇನ್ನು ಬೆಳಗ್ಗೆಯಿಂದ ಅಡುಗೆ ಮನೆಯಲ್ಲಿ ಕೆಲಸ ಮಾಡಿ.. ಮಾಡಿ ಸುಸ್ತಾಗಿರುತ್ತಲ್ವಾ ಸ್ವಲ್ಪವಾದರೂ ರೆಸ್ಟ್ ಮಾಡೋಣ ಅಂತ ಮೊಬೈಲ್ ಹಿಡಿದು ಕುಳಿತ್ಕೊಂಡರೆ ಸಾಕು ನಾನು ಆನ್ ಲೈನ್ನಲ್ಲಿ ಇರೋದು ನೋಡಿ ಯಾರಾದರೂ ಗೆಳತಿಯರು ಫೋನ್ ಮಾಡ್ತಾರೆ ,ಅವರು ಫೋನ್ ಮಾಡಿದ ಮೇಲೆ ರಿಸೀವ್ ಮಾಡದೇ

ಮಾತನಾಡದೇ ಇರೋಕಾಗುತ್ತಾ? ಅದು ನ್ಯಾಯಾನಾ? ಧರ್ಮನಾ? ಇಲ್ಲ ತಾನೇ? ಹಾಗಾಗಿ ಮಾತಾಡ್ತೀನಿ, ನಾವೇನು ಹೆಚ್ಚು ಸಮಯ ಮಾತಾಡೋಲ್ಲ ,ದಾರಾವಾಹಿ, ಸಿನಿಮಾ ಅದು..ಇದು ವಿಷಯ ಮಾತನಾಡಿ ಫೋನ್ ಇಡಬೇಕಾದ್ರೆ ಒಂದೆರಡು ಗಂಟೆ ಆಗುತ್ತಪ್ಪ, ಮತ್ತೆ ಮನೆಕ್ಲೀನಿಂಗ್ ಅಡುಗೆ ಮಾಡೋದು ಅದು..ಇದು ಅಂತ ಎಷ್ಟೊಂದು ಕೆಲ್ಸ ಇರುತ್ತೆ,

ಇನ್ನು ಮಧ್ಯಾಹ್ನಕ್ಕೆ ರುಚಿ ರುಚಿಯಾದ ಅಡುಗೇನೆ ಮಾಡಬೇಕೆಂದು ಯು ಟ್ಯೂಬ್ ನೋಡ್ತಾ ಕೂತ್ಕೋತೀನಿ, ಅದನ್ನ ನೋಡಿ ಮುಗಿಸುವಾಗಲೇ ಊಟದ ಸಮಯ ಆಗಿರುತ್ತೆ, ಇನ್ನು ಹೊಸ ರುಚಿ ಮಾಡೋಕೆ ಎಲ್ಲಿರುತ್ತೆ ಪುರುಸೊತ್ತು? ಹೇಗೂ ಸಂಡೆ ಯಜಮಾನ್ರಿಗೆ ಆಫೀಸಿಗೆ ರಜೆ ಇರುತ್ತಲ್ವಾ ? ಇಡೀ ದಿನ ಏನೂ ಕೆಲಸ ಇರ್ದೇ ಸುಮ್ನೆ ಕೂತ್ಕೊಂಡಿರ್ತಾರಲ್ಲ ಹಾಗಾಗಿ ಅವರ ಹತ್ತಿರವಾದ್ರೂ ಮಾಡಿಸೋಕಂತ ಪ್ರತಿದಿನ ನೋಡ್ತನೇ ಇರ್ತೀನಿ,

ಸಧ್ಯ ! ಸಂಜೆಯ ಸ್ನ್ಯಾಕ್ಸ್ ಅಂತ ಏನು ಮಾಡೋಕಿರಲ್ಲ, ನನಗೆ ಪುರುಸೊತ್ತು ಇರೋಲ್ಲ ಅನ್ನೋದು ಯಜಮಾನ್ರಿಗೆ ಗೊತ್ತಿರೋದರಿಂದ ಅವರೇ ಆಫೀಸಿನಿಂದ ಬರುವಾಗ ಏನಾದರೂ ತಂದು ಬಿಡ್ತಾರೆ, ಅದೊಂದು ಕೆಲ್ಸ ಕಡಿಮೆ ಆಯ್ತು ನೋಡಿ.

ಬೆಳಗ್ಗೆ ಎದ್ದು ಯೋಗ ಮಾಡು ವಾಕ್ ಮಾಡು ಭಜನೆ ಕ್ಲಾಸಿಗಾದ್ರೂ ಸೇರಿಕೋ ಅಂತ ಹೇಳ್ತಾನೇ ಇರ್ತಾರೆ, ನನಗೂ ಎಲ್ಲಾ ಮಾಡಬೇಕು ಕಲಿಬೇಕು ಅನ್ನೋ ಆಸೆ ಏನೋ ಇದೆ ,ಆದರೆ ನಿಮಗೆ ಗೊತ್ತಿದೆಯಲ್ಲ ನನಗೆ ಯಾವುದಕ್ಕೂ ಪುರುಸೊತ್ತೇ ಆಗೋಲ್ಲ ಅಂತ,

ಈ ಫೇಸ್ಬುಕ್ನಲ್ಲಿ ಒಂದೊಂದು ಸಲ ಒಂದೊಂದು ಅಭಿಯಾನ ಇದ್ದಕ್ಕಿದ್ದಂತೆ ಶುರುವಾಗಿ ಬಿಡುತ್ತೆ, ಯಾವ ಸಮಯದಲ್ಲಿ ಯಾವ ಅಭಿಯಾನ ಶುರುವಾಗುತ್ತೆ ಅಂತ ಹೇಳೋದು ತುಂಬಾ ಕಷ್ಟ ಸೇಮ್ ಒಂದೊಂದು ಬಾರಿ ಒಂದೊಂದು ವೈರಸ್ನಿಂದ ಒಂದೊಂದು ಹೊಸ..ಹೊಸ ಕಾಯಿಲೆ ಬಂದ ಹಾಗೆ, ಕಾಯಿಲೆ ಬಂದಾಗ ವಾಸಿಯಾಗಬೇಕೆಂದರೆ ಔಷಧಿ ತಗೋಬೇಕು ಹಾಗೆಯೇ ವಾಸಿಯಾಗೋಕೆ ಒಂದಷ್ಟು ಸಮಯವೂ ಬೇಕಲ್ವಾ ಹಾಗೇನೇ ಈ ಅಭಿಯಾನದಲ್ಲಿ ಪಾಲ್ಗೊಳ್ಳಬೇಕಂದ್ರೆ ಒಂದಷ್ಟು ಸಮಯ ಬೇಕೇಬೇಕು, ಒಮ್ಮೊಮ್ಮೆ ಎರಡು ಜಡೆ ಹಾಕಿದ ಫೋಟೋ ಎಂಬ ಅಭಿಯಾನಕ್ಕೆ ನಮ್ಮನ್ನ ಟ್ಯಾಗ್ ಮಾಡಿರ್ತಾರೆ, ಎರಡು ಜಡೆ ಹಾಕೊಂಡು ಡ್ರೆಸ್ ಹಾಕೊಂಡು ಫೋಟೋ

ತೆಗೆದು ಕಳಿಸುವ ವೇಳೆಗೆ ಯಜಮಾನ್ರು ಕೆಲ್ಸ ಮುಗಿಸಿ ಮನೆಗೆ ಬರುವ ಸಮಯ ಆಗಿರುತ್ತದೆ, ಅವರು ಮನೆಗೆ ಬಂದ ಮೇಲೆ ಪುರುಸೊತ್ತೇ ಇಲ್ಲ ಬಿಡಿ, ದಣಿದು ಬಂದಿರ್ತಾರೆ ಒಂದು ಲೋಟ ಬಿಸಿ.. ಬಿಸಿ ಕಾಫಿ ಕೊಡಬೇಕು, ಅವರು ತಂದಿರೋ ಸ್ನ್ಯಾಕ್ಸ್ ತಿನ್ನಬೇಕು, ಅವರ ಮೊಬೈಲ್ ಒಂದು ಬಾರಿ ಚೆಕ್ ಮಾಡಬೇಕು ಅಯ್ಯಪ್ಪ..ಒಂದೇ ಎರಡೇ ಕೆಲ್ಸ? ಒಂದೊಂದು ಸಲ ದಿನದಲ್ಲಿ ಇಪ್ಪತ್ತನಾಲ್ಕು ಗಂಟೆ ಬದಲು ಮೂವತ್ತು ಇರ್ಬಾರದಾಗಿತ್ತಾ ಅಂತ ಅನ್ನಿಸಿಬಿಡೋದುಂಟು, ಇದರ ಮಧ್ಯವೇ ಯಾವುದೇ ಕ್ಷೇತ್ರದಲ್ಲಿ ನೋಡಿದರೂ ಮಹಿಳೆಯರದೇ ಮೇಲುಗೈ ಎಂದು ಬರ್ತಾ ಇರುತ್ತೆ, ಆಗೆಲ್ಲ ನನಗನ್ನಿಸೋದು ಇವರಿಗೆಲ್ಲ ಒಂದು ದಿನಕ್ಕೆ ಎಷ್ಟು ಗಂಟೆ? ಅಂತ ಆಶ್ಚರ್ಯ ಕೂಡ ಆಗುತ್ತೆ. ನೀವೇನೆ ಹೇಳಿಪ್ಪ ಮನುಷ್ಯ ಬ್ಯುಸಿ ಇದ್ದಷ್ಟೂ ಆರೋಗ್ಯವಂತೆ, ಯಾವ ರೀತಿ ಬ್ಯುಸಿಯಾಗಿರ್ತೀವಿ ಅನ್ನುವುದರ ಮೇಲೆ ನಮಗೆ ಯಶಸ್ಸು ದೊರೆಯುತ್ತೆ, ಪುರುಸೊತ್ತು ಇಲ್ಲದಿದ್ರೂ ಪುರುಸೊತ್ತು ಮಾಡಿಕೊಂಡು ಈ ನಗೆಬರಹ ಬರ್ದಿದೀನಿ, ನೀವು ಕೂಡ ಪುರುಸೊತ್ತು ಇಲ್ಲದಿದ್ದರೂ ಸ್ವಲ್ಪ ಪುರುಸೊತ್ತು ಮಾಡ್ಕೊಂಡು ಓದ್ತೀರಾ ಅಲ್ವಾ?

- o –



# ಶ್ವಾನ ಪುರಾಣ

-ಪದ್ಮನಾಭ ಡಿ

ಮದುವೆಯಾದ ಹದಿನೈದು ದಿನಗಳ ಬಳಿಕ ಮತ್ತೆ ಕಛೇರಿಯ ಕಾರ್ಯನಿಮಿತ್ತ ಮೈಸೂರಿಗೆ ಬರಬೇಕಾಗಿತ್ತು. ಆಗ ಒಬ್ಬಳೇ ಇಲ್ಲಿ ಮಾಡುವುದೇನು ನಾನು ಬರುವೆ ಅಮ್ಮನ ಮನೆಯಲ್ಲಿ ಇರೋಣ ಎಂದು ನನ್ನಾಕೆ ಹೇಳಿದಳು. ಸರಿ ಹೊಂ ಮಿನಿಸ್ಟರ್ ನ ಕೋರಿಕೆ, ಅದೂ ಮದುವೆಯಾದ ಬಳಿಕ ಮೊದಲ ಬೇಡಿಕೆ ತಿರಸ್ಕರಿಸಲಾಗದು. ಸರಿ ಎಂದು ಗೋಣಾಡಿಸಿ ಜೊತೆಯಲ್ಲಿ ಹೊರಟೆವು.

ಸ್ವಾಗತ ಭವ್ಯವಾಗಿತ್ತು. ರಸ್ತೆಯ ಕೊನೆಯಲ್ಲಿ ಆಟೋದಿಂದ ಇಳಿದ ಕೂಡಲೆ ನನ್ನಾಕೆ ತನ್ನ ಗೆಳತಿಯ ಜೊತೆ ಮಾತನಾಡುತ್ತ ನಿಂತಳು. ನಾನು ಒಂದೆರಡು ನಿಮಿಷ ಕಾದು ಮನೆಯ ಬಳಿ ಹೊಸ್ತಿಲ ಬಳಿ ಹೋಗುತ್ತಿದ್ದಂತೆ ಧಿಢೀರನೆ ನಾಯಿ ಮೇಲೆಗರಿ ಬೊಗಳಲಾರಂಭಿಸಿತು. ನಾನು ಬೆಚ್ಚಿಬಿದ್ದೆ. ನಮ್ಮ ಮಾವ ಸ್ನಾನ ಮಾಡಲು ಹೋಗಿದ್ದಾರೆ. ಬಚ್ಚಲು ಮನೆಯಿಂದ ಯಾರೋ ಬಂದಿದಾರೆ ನೋಡೇ ಅಂತ ಕಿರುಚುತಿದ್ದಾರೆ. ನಮ್ಮ ಅತ್ತೆ ಅವರ ಪಾಡಿಗೆ ದೇವರ ಮುಂದೆ ಕುಳಿತಿದ್ದಾರೆ. ಅವರಿಗೆ ಕಿವಿ ಕೇಳಿಸುವುದಿಲ್ಲ.



ನನ್ನಾಕೆಯ ಮಾತು ಮುಗಿಯಲೇ ಇಲ್ಲ. ಪಕ್ಕದ ಮನೆಯವರು ಆಪದ್ಬಾಂಧವನಂತೆ ಬಂದರು. ಬನ್ನಿ ಕುಳಿತುಕೊಳ್ಳಿ ಎಂದು ಒಳಕರೆದು ನಾಯಿಯಿಂದ ರಕ್ಷಿಸಿದರು. ಸ್ವಲ್ಪ ಹೊತ್ತಾದ ಬಳಿಕ ನನ್ನಾಕೆ ಬಂದು ಇದೇನು ಮನೆ ಕನ್ಫ್ಯೂಸ್ ಆಯಿತಾ ಇಲ್ಲ ಕೂತಿದ್ದೀರಿ ಎನ್ನೋದೇ. ಅಷ್ಟೊತ್ತಿಗೆ ಮಾವನವರು ಹೊರಗೆ ಬಂದು ನಾಯಿ ಬೊಗಳಿತಲ್ಲ ಯಾರೂ ಇಲ್ವಲ್ಲ ಅಂತ ಸುತ್ತ ನೋಡ್ತಾ ಇದ್ರು. ನಾನು ಅವರನ್ನು ಗಮನಿಸಿ ನಮಸ್ಕಾರ ಮಾವ ಎಂದಾಗ ತಿರುಗಿದರು. ಒಳಗೆ ಬನ್ನಿ ಸ್ನಾನಕ್ಕೆ ಹೋಗಿದ್ದೆ ತಡವಾಯಿತು ಕ್ಷಮಿಸಿ ಎಂದರು. ನಾನು "ಮಾವ ಮೊದಲು ನಾಯಿಯನ್ನು ಕಟ್ಟಿ ಅಂದೆ. ಅದಕ್ಕೆ ನನ್ನಾಕೆ ಏನು ಮಾಡಲ್ಲ ಕಣೋ ಸಾಕಿದ ನಾಯಿ ಬಾ ಪರಿಚಯ ಮಾಡ್ಕೊಡ್ತಿನಿ ಅಂದ್ಳು. ನಾನು" ಅಲ್ಲವೇ ಗಂಡನಿಗೆ ಗೆಳೆಯರನ್ನು, ಬಂಧುಗಳನ್ನು ಪರಿಚಯ ಮಾಡಿಕೊಡೋದು ಕೇಳಿದೀನಿ, ನಾಯಿನ ಪರಿಚಯ ಮಾಡ್ಕೊಡ್ತೀನಿ ಅಂತ್ಯಲ್ಲಾ ಅಂದೆ" ಅವಳು ನಕ್ಕಬಿಟ್ಟು "ಹಾಗಲ್ಲ ಕಣೋ ಪರಿಚಯ ಗುರುತು ಸಿಕ್ಕಿದ ಮೇಲೆ ಬೊಗಳಲ್ಲ ಕಚ್ಚಲ್ಲ. ಫ್ರೆಂಡ್ಲಿ ಆಗಿಬಿಡತ್ತೆ" ಅಂದಳು. ನಮ್ಮ ಮಾವ "ಅಲ್ಲಮ್ಮಾ, ಗಂಡನ್ನ ಹೋಗೋ ಬಾರೋ ಅಂತ ಏಕವಚನದಲ್ಲಿ ಮಾತಾಡಿಸ್ತೀಯ ನೋಡಿದವರು ಏನಂತಾರೆ? ಅಂದಾಗ ಅವಳು ಪರವಾಗಿಲ್ಲ ಬಿಡಿ ಅಣ್ಣ ಸೋದರಮಾವನ ಮಗ ಅಲ್ವಾ ಅಡ್ಜಸ್ಟ್ ಮಾಡ್ಕೋತಾನೆ" ಅಂದ್ಳು.

ಸರಿ ಒಳಗೆ ನಡೀರಿ ಮೊದ್ಲು ತಿಂಡಿ ತಿನ್ನಿ. ಅನ್ನುವ ವೇಳೆಗೆ ಅತ್ತೆಯವರು ಬಂದರು. ಕುಶಲೋಪರಿ ಆದಮೇಲೆ ನೀವು ಬರೋದು ನನಗೆ ಗೊತ್ತಿರಲಿಲ್ಲ. ಹಾಗಾಗಿ ವಿಶೇಷ ಏನೂ ಮಾಡಲಿಲ್ಲ. ಸ್ವಲ್ಪ ಕಾಫಿ ಕುಡಿದು ಸುಧಾರಿಸಿಕೊಳ್ಳಿ. ಬೇಗನೆ ಟಿಫಿನ್ ರೆಡಿ ಮಾಡ್ತೀನಿ ಅಂತ ಅಡಿಗೆಮನೆಗೆ ಹೋದರು. ಇವಳೂ ಹೋದಳು. ಏನೋ ಮಾಡಿದ್ಯಾ ಕುಕ್ಕರಲ್ಲಿ ಅಂದಳು. ನಿನ್ನೆ ಅನ್ನ ಮಿಕ್ಕಿತ್ತು ಅದಕ್ಕೇ ಈರುಳ್ಳಿ ವಗ್ಗರಣೆ ಹಾಕಣಾಂತ ಅತ್ತೆ ಹೇಳುವಷ್ಟರಲ್ಲಿ ನನ್ನಾಕೆ "ಪದ್ದು ಈರುಳ್ಳಿ ವಗ್ಗರಣೆಅನ್ನ ತಂದುಕೊಡಲಾ "?ಎಂದು ಕೇಳಿದಳು.

ಅತ್ತೆ ಮಾವ ಇಬ್ಬರಿಗೂ ಒಂದು ತರಹ ನಾಚಿಕೆ ಆದಂತಾಯಿತು. "ನನ್ನ ಮಾನ ತೆಗಿಬೇಡ್ವೇ ಸುಧಾ" ಅಂತ ಕಿರುಚಿದರು. ನಾನು ಸುಮ್ಮನಿರಿ ಟೆನ್ಷನ್ ಬೇಡ ಸಡನ್ನಾಗಿ ಬರಬೇಕಾಯಿತು ಇಲ್ಲಾಂದ್ರೆ ಮೊದಲೇ ಫೋನ್ ಮಾಡಿ ಬರ್ತಿದ್ದೆ ಅಂತ ಹೇಳಿ ಸಮಾಧಾನಿಸಿದೆ.

ನನಗೆ ಹೋಟೆಲ್ನಿಂದ ಇಡ್ಲಿ ತರಿಸಿಕೊಟ್ಟು ಅವರೆಲ್ಲ ಅನ್ನವನ್ನು ಸವಿದರು. ಮಧ್ಯಾಹ್ನ ರಾಜೋಪಚಾರ ನಡೆಯಿತು. ಮಾತುಕಥೆಗಳು ಸಾಗುತ್ತಿರುವ ಸಮಯದಲ್ಲಿ ಪಕ್ಕದ ಮನೆಯವರು ಬಂದರು.

ಮಾವನವರು ಮಾತನಾಡುತ್ತಾ ಮದುವೆ ಕರ್ಫ್ಯೂನಲ್ಲಿ ಗೊಂದಲದ ನಡುವೆ ಆಗಿಹೋಯಿತು. ಹನಿಮೂನ್ ಗೆ ಊಟಿ ಕೊಡೈಕೆನಾಲ್ಗೆ ಕಳಿಸಬೇಕು ಅಂದುಕೊಂಡಿದ್ದೆ. ಏನು ಮಾಡುವುದು ? ಆಗಲಿಲ್ಲ. ಕಾವೇರಿ ಗಲಾಟೆ ಇನ್ನೂ ಹೊಗೆಯಾಡ್ತಿದೆ ಅಂದರು. ಆಗ ನಾನು ಚಿಂತಿಸಬೇಡಿ ಮಾವ ಅಲ್ಲೇನು ಮಾಡ್ತಿದ್ದೆವೋ ಅದನ್ನೇ ಇಲ್ಲಿ ಮಾಡಿದರಾಯಿತು ಬಿಡಿ ಅಂತ ಹಾಸ್ಯ ಮಾಡಿದೆ.

ಇನ್ನು ರಾತ್ರಿ ನಮಗೆ ಮಲಗಲು ವ್ಯವಸ್ಥೆ ಆಗಬೇಕಲ್ಲ ಇದು ಕೊಂಚ ಚರ್ಚೆಯ ವಿಷಯ ಆಯಿತು. ಮಂಚ ಇಲ್ಲವಲ್ಲ ಅಂತ ಪೇಚಾಡುತ್ತಿದ್ದರು. ನಾನು ಸುಮ್ಮನಿರಿ ಮಾವ ಮಂಚದಿಂದ ಹೊರಳಿ ಬೀಳುವ ಅಪಾಯ ಇಲ್ಲ. ಕೆಳಗೇ ಮಲಗುವವಎಂದೆ.ಆ ಮನೆ ಚಿಕ್ಕದು EWS . ೩೦*೧೫ ಇರಬಹುದು. ರೂಮಲ್ಲ ರೂಂ ತರಹ ಎನ್ನಬಹುದಾದ ಕೊಠಡಿ ಎಲ್ಲರೂ ಹಾಲಲ್ಲಿ ವರಾಂಡದಲ್ಲಿ ಮಲಗುತಿದ್ದರು. ಪೆಟ್ಟಿಗೆ ಬೆಡ್ ಶೀಟ್ ಹಾಸಿಗೆ ಚಾಪೆಗಳನ್ನು ಆ ಕೊಠಡಿ ಎನ್ನುವ ಸ್ಥಳದಲ್ಲಿ ಇಟ್ಟಿದ್ದರು. ಅದನ್ನೇ ಸ್ವಚ್ಛ ಗೊಳಿಸಿ ನಮಗೆ ಅನುವು ಮಾಡಿಕೊಡಲಾಯಿತು.

ಅಷ್ಟೊತ್ತಿಗೆ ಭಾವಮೈದುನ ಬಂದ "ಅಕ್ಕ ಭಾವನವರನ್ನು ರಾತ್ರಿ ಉಬ್ಬೆಮನೆಯಲಿ ಹಾಕುವುದಾ"? ಎಂದು ಕೇಳಿದ. ನನಗೆ ಅರ್ಥವಾಗಲಿಲ್ಲ ಉಬ್ಬೆಮನೆ ಎಂದರೆ ಏನು ಎಂದೆ. ಆಗ ಕೊಠಡಿ ತುಂಬಾ ಸೆಕೆಯಲ್ಲವಾ ಅದಕ್ಕೇ ಅದನ್ನು ಉಬ್ಬೆಮನೆ ಎನ್ನುತ್ತೇವೆ ಎಂದು ಹೇಳಿದ. ಮಲಗುವಾಗ ತಾನೇ ಫ್ಯಾನ್ ಹಾಕಿದರಾಯಿತು ಎಂದು ಸುಮ್ಮನಿರಿಸಿದೆ.

ಮಾತನಾಡುತ್ತಾ ಕೇಳಿದೆ ಅಲ್ಲ ನಿಮ್ಮನೆಯಲ್ಲಿ ನಾಯಿ ಅಗತ್ಯವಿತ್ತೇ? ಏಳು ಜನವಿದ್ದೀರಿ ಇಷ್ಟು ಚಿಕ್ಕ ಮನೆ ನಾಯಿ ಏಕೆ ತಂದಿರಿ? ಸುಮ್ಮನೇ ತರಬೇಕೆನಿಸಿತು ಈಗ ಒಂದು ತಿಂಗಳಾಯಿತು ಅಷ್ಟೇ. ಅಂದ ನನ್ನಾಕೆಯೇ ನಾಯಿಯ ಆರೈಕೆ ಮಾಡುತ್ತಿದ್ದಳು ಎಂದು ಬಾಮೈದ ಹೇಳಿದ. ಆ ನಾಯಿ ಓಡಿಬಂದು ಅವಳ ಪಕ್ಕವೇ ಕುಳಿತುಕೊಳ್ಳುತ್ತಿತ್ತು. ನನಗೆ ನಾಯಿ ಎಂದರೆ ಮುಜುಗರ ಹೆದರಿಕೆ ಕೂಡಾ ನನ್ನಾಕೆಯ ಬಳಿ ಹೋಗುವಂತೆಯೇ ಇರಲಿಲ್ಲ. ಅಕಸ್ಮಾತ್ತಾಗಿ ಅವಳನ್ನು ಮುಟ್ಟಿದರೂ ಬೊಗಳಲು ಆರಂಭಿಸಿಬಿಡುತ್ತಿತ್ತು. ನಾನು "ಅಯ್ಯೋ ದುರ್ವಿಧಿಯೇ ಮಾವ ಮಗಳನ್ನೇನೋ ಕೊಟ್ಟ ಜೊತೆಗೆ ಅದೇಕೆ ನಾಯಿನ ಛೂ ಬಿಟ್ಟ ನಾನೇನು ಕರ್ಮ ಮಾಡಿದ್ದೆನೋ"? ಅಂತ ಗೊಣಗಿಕೊಳ್ತಾ ಇದ್ದೆ.

ಆಮೇಲೆ ನಾಯಿಯನ್ನು ಕಟ್ಟಿಹಾಕಿದರು. ರಾತ್ರಿ ಹತ್ತು ಗಂಟೆಯವರೆಗೂ ಸಮಸ್ಯೆ ಇರಲಿಲ್ಲ. ಮಲಗುವಾಗ ನಾಯಿಯ ಕಟ್ಟು ಬಿಚ್ಚಿಬಿಡುತ್ತಾರೆ.

ನಮಗೆ ಮೇಲೆ ಹೇಳಿದ ಕೊಠಡಿಯ ವ್ಯವಸ್ಥೆ ಆಯಿತು. ಸೆಕೆ ಎಂದು ಒಂದು ಟೇಬಲ್ ಫ್ಯಾನ್ ತರಿಸಿ ಇಟ್ಟಿದ್ದರು. ಅದು ಆನ್ ಮಾಡಿದರೆ ಗಾಳಿಗಿಂತ ಶಬ್ದ ಜಾಸ್ತಿ ಬರುತ್ತಿತ್ತು. ರೊಟೇಟ್ ಮಾಡಿ ಶಬ್ದ ಕಡಿಮೆಯಾಗುತ್ತದೆ ಎಂದರು ರೊಟೇಟ್ ಆಗುವಾಗ ಜಾರಿ ಕೆಳಗೇ ಬಿದ್ದುಬಿಡುತ್ತಿತ್ತು. ಏಕೆಂದರೆ ಫ್ಯಾನ್ ಇಟ್ಟಿದ್ದು ಹಳೇಕಾಲದ ಮೇಜ್ ಅಥವ ಪೆಟಾರಿಯ ಮೇಲೆ. ಅದರ ಮೇಲ್ಮೈ ಇಳಿಜಾರು ಹಾಗೂ ನುಣುಪಾಗಿತ್ತು. ಹೆದರಿಕೊಂಡೇ ಮಲಗಬೇಕಾಗಿತ್ತು. ನಾನು ಸುಧಾ ನಾಳೆಯೇ ವಾಪಸ್ಸು ಹೋಗಿಬಿಡುವ ಅಂದೆ ಅವಳಿಗೆ ನಕ್ಕುಬಿಟ್ಟಳು.

ಮಧ್ಯರಾತ್ರಿ ಬಹಿರ್ದೆಸೆಗೆ ಹೋಗಬೆಕೆನಿಸಿತು. ಕೊಠಡಿ ಬಾಗಿಲು ತೆಗೆದೆ ಎಲ್ಲೊ ಮೂಲೆಯಲ್ಲಿದ್ದ ನಾಯಿ ಧೀಡೀರನೆ ಬೊಗಳಲಾರಂಭಿಸಿತು ಹತ್ತಿರಕ್ಕೆ ಬಂದಿತು. ನನಗೆ ಬಚ್ಚಲು ಮನೆಗೆ ಹೋಗಲು ಅವಕಾಶ ನೀಡುತ್ತಿಲ್ಲ. ನನ್ನಾಕೆ ನನ್ನ ಸ್ಥಿತಿ ನೋಡಿ ಎದ್ದು ಬಂದಳು. ಬಾರೋ ಬಾರೋ ಅಂತ ಕೂಗಿ ನಾಯಿಯನ್ನು ಮುದ್ದಾಡುತ್ತಾ ಹಿಡಿದುಕೊಂಡಳು.

ನಂತರ ನನ್ನ ಕೆಲಸಕಾರ್ಯಗಳು ನೆರವೇರಿದವು. ಮುಗಿದ ನಂತರ ಬಂದು ನೋಡುತ್ತೇನೆ ಶ್ವಾನ ನನ್ನಾಕೆಯ ಬಳಿಯಲ್ಲೇ ಕುಳಿತಿದೆ. ನಾನು "ಲೇ ಕಳಿಸೇ ಅದನ್ನು ಆಚೆಗೆ" ಎಂದು ಕಿರುಚಿದಾಗ ನಮ್ಮ ಅತ್ತೆ ಎದ್ದುಬಂದರು ಆಚೆಗೆ ಎಂದಿದ್ದು ಅವರಿಗೆ ಏನು ಕೇಳಿಸಿತೋ ನಾಚಿಕೆ ಏಕಪ್ಪ ನಿಮ್ಮನೆ ಅಂತಾನೇ ತಿಳ್ಕೋ ಏನು ಬೇಕಾಗಿತ್ತು ಅಂದ್ರು.

ನಾನು ನಿಮ್ಮೆಂದ ಈ ಹೊತ್ತಲ್ಲಿ. ಏನು ಬೇಕಿತ್ತು ಬೇಕಿರೋದನ್ನು ಪಡೆಯೋಕೆ ನಾಯಿ ಅಡ್ಡ ಇದೆ ಅಂತ ಮೆಲ್ಲಗೆ ಹೇಳಿಕೊಂಡೆ. ಆಗ ಬಾಮೈದ ಬಂದು ನಾಯಿಯನ್ನು ಹೊರಗೆ ಕರೆದುಕೊಂಡು ಹೋಗಿ ಕಿಟಕಿಗೆ ಕಟ್ಟಿದ.

ಇಷ್ಟಕ್ಕೆ ಮುಗಿಯಲಿಲ್ಲ. ಉಬ್ಬೆಮನೆ ಪ್ರಕರಣ ಸೆಕೆ ಫ್ಯಾನ್ ಹಾಕಲು ಜಾರಿ ಬೀಳುತ್ತದೆ ಎಂಬ ಭಯ. ಹೊರಳಿದರೆ ಬಟ್ಟೆ ಇಟ್ಟಿರುವ ಟ್ರಂಕ್ ತಲೆಗೆ ಬಡಿಯುತ್ತದೆ. ಮೈಮುರಿಯಲು ಕೈ ಹಿಂದೆ ಹಾಕಿದರೆ

ಗೋಡೆ ಅಡ್ಡ. ಹಾಗೂ ಹೀಗೂ ಬೆಳಗಿನ ಜಾವ ಸ್ವಲ್ಪ ನಿದ್ದೆ ಹತ್ತಿತು. ಸುಮಾರು ನಾಲ್ಕುವರೆ ಐದುಗಂಟೆ ಇರಬಹುದು ನಾದಿನಿ ಬಾಗಿಲು ಬಡಿದಳು ರಾತ್ರೆ ಮರೆತುಬಿಟ್ಟೆ ಎನ್ ಸಿ ಸಿ ಹೋಗಬೇಕು ಡ್ರೆಸ್ ತೆಗೆದುಕೊಳ್ಳಬೇಕು ಎಂದಳು. ಬಾಮ್ಮ ಅಂತ ಕೂಗಿದೆ. ಬಂದು ಮೇಲಿಟ್ಟ ಡ್ರೆಸ್ ತೆಗೆದುಕೊಳ್ಳುವಾಗ ಸೆಜ್ಜಾ ದಿಂದ ಎರಡು ಪುಸ್ತಕಗಳು ತಲೆಯ ಮೇಲೆ ಬಿದ್ದವು. ಸಾವರಿಸಿಕೊಂಡು ಹೊರಗೆ ಹಾಲಿನಲ್ಲಿ ಕುಳಿತೆ. ಹಾಲಿನಲ್ಲಿ ಸೀಲಿಂಗ್ ಫ್ಯಾನ್ ಇದ್ದುದರಿಂದ ಹಿತವಾಗಿ ಅಲ್ಲೆ ವಿರಮಿಸಿದೆ.



ಬೆಳಗಾಯಿತು. ನನ್ನಾಕೆ ಎದ್ದುಬಂದಳು ಆಕೆ ಶ್ವಾನಪ್ರಿಯೆ ಅಷ್ಟೇ ಅಲ್ಲ. ಗಾನಪ್ರಿಯೆಯೂ ಹೌದು. ಆಗಾಗ್ಗೆ ಚಿತ್ರಗೀತೆಗಳನ್ನು ಗುನುಗುತ್ತಿರುತ್ತಾಳೆ. ಅಂದು ಪ್ರೀತಿಸು ಸಮೀಪಿಸು ಎಂದು ಪಿ ಬಿ ಶ್ರೀನಿವಾಸ್ ಮತ್ತು ಎಸ್ ಜಾನಕಿ ಹಾಡಿದ ಗೀತೆ ಹಾಡುತ್ತಾ ಹೊರಬಂದಳು

ಅವಳ ದನಿ ಕೇಳುತ್ತಿದ್ದಂತೆ ನಾಯಿ ಓಡಿಬಂದು ಅವಳನ್ನು ಸಮೀಪಿಸಿ ಮಡಿಲಲ್ಲಿ ಮಲಗಿಯೇ ಬಿಟ್ಟಿತು. ಇನ್ನು ನಾನು ಪ್ರೀತಿಸಿ ಸಮೀಪಿಸುವುದೆಂತು ಅವಳು ಈ ಹಾಡು ಎಷ್ಟು ಚೆನ್ನಾಗಿದೆ ಅಲ್ವಾ ಅಂದಳು. ನಾನು ಲೇ ನಾಯಿನ ಮೊದಲು ಕಟ್ಟಿಹಾಕಿ ಆಮೇಲೆ ನನ್ನ ಮುಂದೆ ಈ ಹಾಡು ಹೇಳೆ ಅಂದೆ.

ಅವಳು ನಗಲು ಆರಂಭಿಸಿದಳು. ನಮ್ಮತ್ತೆ ಪಕ್ಕದ ಮನೆಯವರ ಜೊತೆ "ನನ್ನ ಮಗಳು ಅಳಿಯ ಬಂದ್ರೆ ಮನೆಯೆಲ್ಲ ಕಿಲಕಿಲ ಅಂತಿರತ್ತೆ ಅಲ್ವಾ ತುಂಬಾ ಖುಷಿಯಾಗತ್ತೆ ಅಂದರು. ನನಗೆ? ಓದಿದ ನಿಮಗೆ ?

-o-



# ಮನಸೇ ಮಂತ್ರಾಲಯ

-ಗೌರಿ ಶ್ರೀಪಾದ್

ಇದು ತುಂಬಾ ಚಿಕ್ಕ ಹಾಗೂ ಚೊಕ್ಕವಾದದ್ದು. ಮನಸ್ಸೆಂಬ ಸೌಧವನ್ನು ನಾವು ಯಾವ ರೀತಿ ಕಟ್ಟುತ್ತೇವೆ ಅನ್ನುವುದರ ಮೇಲೆ ಎಲ್ಲ ಸಂಬಂಧಗಳು ನಿಂತಿರುತ್ತವೆ. ಕೆಲವರ ಮನಸ್ಸು ನೀನು ಕೆಟ್ಟದ್ದು ಮಾಡಬೇಡ ಅಂತಾ ಹೇಳ್ತಾ ಇದ್ದರೆ ಮನದಿಂದ ಹೊರಗಡೆ ಇರೋ ಕೆಲವು ಸಂಬಂಧಗಳು ಅದನ್ನು ನೀನು ಮಾಡು ಎಂದು ಉತ್ತೇಜನ ಕೊಡ್ತಾ ಇದ್ದರೆ ಆಗ ಅವನು ಮನಸ್ಸಿನ ಮಾತು ಕೇಳಿ ಮಾಡದೇ ಇರುವುದು ಒಳ್ಳೆದು ಅಲ್ವಾ. ಮನಸ್ಸು ಚಂಚಲ ನಾವು ಹೇಗೆ ಅದನ್ನು ಉಪಯೋಗ ಮಾಡಿಕೊಳ್ತೀವೋ ಅದರ ಮೇಲೆ ನಮ್ಮ ಭವಿಷ್ಯ ನಿರ್ಧಾರ ವಾಗಿರುತ್ತದೆ.

ಮನಸ್ಸಿದ್ದರೆ ಮಾರ್ಗ ಅಂತಾ ಹೇಳ್ತಾರೆ ಅದೂ ನಿಜ, ಏಕೆಂದರೆ ನಾವುಯಾವುದೇ ಕೆಲಸ ಮಾಡಬೇಕು ಅಂದ್ರೆ ಅದೂ ನಮ್ಮ ಮನಸ್ಸಿಗೆ ಒಪ್ಪುವಂತದ್ದು ಆಗಿರ್ಬೇಕು... ನಮ್ಮ ಮನಸ್ಸಿಗೆ ಅದೂ ಬೇಡ ಅನ್ನಿಸಿದಾಗ ಮಾಡದೇ ಇರುವುದು ಒಳ್ಳೇದು.ಒಳ್ಳೆಯ ಮನಸ್ಸಿನಿಂದ ಮಾಡಿದಾಗ ಜಯ ಸಿಗುವುದು ಖಂಡಿತ.

ಎನ್ ಎಸ್ ಲಕ್ಷ್ಮಿ ನಾರಾಯಣ ಭಟ್ ಅವರ ಗೀತೆ 'ಎಲ್ಲಿ ಜಾರಿತೋ ಮನವು ಎಲ್ಲೆ ಮೀರಿತೋ, ಕೇಳಿದ್ದೀರಾ ಎಲ್ಲರೂ.. ಅದರಲ್ಲಿ ನಮ್ಮ ಮನಸ್ಸನ್ನು ಎಲ್ಲ ಕಡೆ ಹೇಗೆ ಬೇಕೋ ಹಾಗೇ ಹರಿಯದಂತೆ ನೋಡಿಕೊಳ್ಳುವ ಶಕ್ತಿ ನಮ್ಮ ಹೃದಯಕ್ಕೆ ಇರಬೇಕು. ಯಾರೋ ಎರಡು ಮಾತು ಚೆನ್ನಾಗಿ ಆಡಿದ್ರಪ್ಪ, ನಮ್ಮನ್ನು ತುಂಬಾ ಹೊಗಳುತ್ತ ಇದಾರೆ ಅಂದ ತಕ್ಷಣ ನಾವು, ಅಟ್ಟಕ್ಕೆ ಏರದೆ ಅವ್ರಿಗೆ ಫಿದಾ ಆಗಿ ಅವರು ಹೇಳಿದ್ದೆಲ್ಲ ನಂಬೋಕೆ ಶುರು ಮಾಡ್ತೀವಿ. ಆಗಲೇ ನಮ್ಮ ಮನಸ್ಸು ಸ್ಥಿಮಿತದಲ್ಲ ಇಲ್ಲಾ ಅಂತಾ ಗೊತ್ತಾಗೋದು. ನಮ್ಮ ಮನಸ್ಸನ್ನು ಹಿಡಿತದಲ್ಲಿ ಇಟ್ಟುಕೊಂಡಿರಬೇಕು ಅನ್ನೋದು ಇಂತಾದಕ್ಕೇನೇ.

ಕೆಲವರು ಬೇಗ ಎಚ್ಚತ್ತು ಕೊಳ್ಳುತ್ತಾರೆ, ಕೆಲವರು ಅದ್ರಲ್ಲೆ ಮುಳುಗಿ ಹೋಗ್ತಾರೆ. ಮನಸ್ಸೆಂಬ ಮನೆಗೆ ಇಂತಹ ಯಾವುದೇ ಬಿರುಗಾಳಿ ಬಂದು ಧೂಳಿಪಟ ಹಾಗೋ ಹಾಗೇ ಮಾಡಿಕೊಳ್ಳದೆ ಎಚ್ಚರ ವಹಿಸುವುದು ಒಳ್ಳೆಯದು.

ಮನಸ್ಸು ಮತ್ತು ಮನೆ ಎರಡು ಸಂತೋಷದಿಂದ ಇರಬೇಕು ಅಂದ್ರೆ ನಮ್ಮ ಸಂಬಂಧಗಳನ್ನು ಸರಿಯಾಗಿ ನಿಭಾಯಿಸಿಕೊಂಡು ಹೋಗಬೇಕು. ಮನದಲ್ಲಿ ಕೆಟ್ಟ ಆಲೋಚನೆ ಗಳಿಗೆ ಜಾಗ ಮಾತ್ರ ಕೊಡಬಾರದು. ಅವೇ ನಮ್ಮನ್ನು ಮತ್ತು ಸಂಬಂಧಗಳನ್ನು ಸುಡುವ ಹಾಗೇ ಮಾಡುತ್ತವೆ. ಒಳ್ಳೆಯದ್ದನ್ನೇ ಯೋಚಿಸಿ ಆದಷ್ಟು ಒಳ್ಳೇದು ಮಾಡೋದನ್ನ ನಮ್ಮ ಮನಸ್ಸಿಗೆ ತಂದುಕೊಳ್ಳಬೇಕು.

ಮನಸ್ಸಿದ್ದರೆ ಮಾರ್ಗ ಅನ್ನೋದರ ಬಗ್ಗೆ ಒಂದು ಚಿಕ್ಕ ಕಥೆ.

ಸೀತಾ ಹುಟ್ಟು ಕುರುಡಿ. ಅವಳಿಗೆ ತಂದೆ ಇರಲಿಲ್ಲ ತಾಯಿ ಒಬ್ಬಳೇ. ಯಾವದೋ ಒಂದು ಚಿಕ್ಕ ಕಂಪನೀಲಿ ಕೆಲಸ ಸೀತಾಳ ತಾಯಿ ಜಲಜ ದು. ಸೀತಾ ಬೆಳೆದು ದೊಡ್ಡವಳಾದ ಮೇಲೆ ಒಬ್ಬಳನ್ನೇ ಮನೇಲಿ ಬಿಟ್ಟು ಬರಲು ಅವಳ ಮನಸು ಒಪ್ಪಲ್ಲ. ಹಾಗಾಗಿ ಅವಳನ್ನು ಜೊತೆಗೆ ಕರೆದುಕೊಂಡು ಹೋಗ್ತಾಳೆ. ಅಲ್ಲೇ ಒಂದು ರೂಮ್ನಲ್ಲಿ ಕೂಡಿಸಿ ತಾನು ಕೆಲಸ ಮಾಡಿ ಬಂದ ಮೇಲೆ ವಾಪಾಸ್ ಮನೆಗೆ ಬರೋದು ಹೀಗೆ ನಡೀತಾ ಇರುತ್ತೆ. ಜಲಜ ಕೆಲಸ ಮಾಡ್ತಾ ಇದ್ದ ಓನರ್ ಮಗ ಒಂದು ದಿನ ಆಫೀಸ್ಗೆ ಬರ್ತಾನೆ. ಸೀತಾ ತುಂಬಾ ಚೆನ್ನಾಗಿ ಇರ್ತಾಳೆ ನೋಡೋದಿಕ್ಕೆ, ಪಾಪ ಅವಳ ದುರದೃಷ್ಟ ಕಣ್ಣು ಇಲ್ಲಾ ಅದೇ ಕೊರಗು. ಆದಿನ ಬಂದ ಬಾಸ್ ಮಗ ನಟರಾಜ್ಇವಳನ್ನು ನೋಡಿ, ಜಲಜಮ್ಮನ ಹತ್ತಿರ ವಿಚಾರ ಮಾಡ್ತಾನೆ. ಯಾಕೆ ಹೀಗೆ ಇವಳು, ಹುಟ್ಟು ಕುರುಡಿನಾ ಹೇಳಿ ಅಂತಾ ಹೌದು ಯಜಮಾನರೇ ಇವಳು ಹಾಗೇ ಅಂತಾ ಹೇಳಿ ತನ್ನ ಪಾಡಿಗೆ ತಾನು ಕೆಲಸ ಮಾಡೋಕೆ ಶುರು ಮಾಡ್ತಾಳೆ. ಆದರೆ ನಟರಾಜ್ ನಿಗೆ ಅವ್ಳನ್ನು ನೋಡಿದ ಮೇಲೆ ನೋಡ್ತಾನೆ ಇರಬೇಕು ಅನ್ನಿಸತೊಡಗಿತು. ಅವನ ಒಳ ಮನಸ್ಸು ಇವಳನ್ನು ಪ್ರೀತಿಸಿ ಮದುವೆಯಾಗು ಅಂತಾ ಹೇಳ್ತಾ ಇತ್ತು. ಇವಳಿಗೆ ಯಾರೂ ಮದುವೆ ಆಗೋವರು ಜಲಜಮ್ಮ ನಾ ಕಷ್ಟ ಹೇಗೆ ನಿವಾರಣೆ ಆಗೋದು ಅನ್ನೋ ಪ್ರಶ್ನೆ ಇವನಿಗೆ ತುಂಬಾ ಕಾಡ್ತಾ ಇತ್ತು. ಮನೆಗೆ ಬಂದು ತಂದೆ ತಾಯಿಯ ಹತ್ತಿರ ಈ ವಿಷಯ ಪ್ರಸ್ತಾಪಿಸಿ, ನಾನು ಮದುವೆ ಆದ್ರೆ ಅವಳನ್ನೇ ಅಂತಾ ಹಟ ಹಿಡಿದು ಕೂತು ಬಿಡ್ತಾನೆ. ಆ ಕುರುಡಿ ಜೊತೆಗೆ ಹೇಗೆ ಸಂಸಾರ ಮಾಡಿಕೊಂಡು ಇರ್ತೀಯ, ಜನ ಏನು ಅಂತಾರೆ ನಮಗೆಲ್ಲ, ಎಂಥ ಒಳ್ಳೆ ಸಂಬಂಧದ ಹೆಣ್ಣುಗಳು ಬರ್ತಾ ಇವೆ. ಅವನ್ನು ಬಿಟ್ಟು ಇವಳು ಯಾಕೆ ಅಂತಾ. ಇವನ ಮನಸ್ಸುಮಾತ್ರ ಅವಳನ್ನೇ ಬಯಸಿತ್ತು. ಬೇರೆ ಹುಡುಗಿ ನೋಡಲು ಒಪ್ಪದೇ ಅವಳನ್ನೇ ಆಗೋದು ಅಂತಾ ನಿರ್ಧಾರ ಮಾಡಿ ಆಗಿತ್ತು ಅವನು. ತಡೆಯಲು ಎಷ್ಟೇ ಪ್ರಯತ್ನ ಪಟ್ಟರೂ, ನಟರಾಜ್ ಮಾತ್ರ ಸೀತಾಳನ್ನು ಬಿಡಲಿಲ್ಲ. ಜಲಜಮ್ಮ ಒಪ್ಪಿಗೆ ಪಡೆದು ಅವಳನ್ನು ಮದುವೆ ಮಾಡಿಕೊಂಡು ಸೀತಾಳಿಗೆ ಒಂದು ಸುಂದರ ಬಾಳನ್ನು ಕೊಡ್ತಾನೆ.

ಮನಸ್ಸು ವಿಶಾಲ ವಾಗಿದ್ರೆ ಮಾತ್ರ ಇಂತಹ ಒಳ್ಳೆ ಕಾರ್ಯಗಳು ನಡೆಯಲು ಸಾಧ್ಯ. ಜೊತೆಗೆ ಹೃದಯ ವೈಶಾಲ್ಯತೆ ಕೂಡಾ ಇರಬೇಕು.

ಮನಸ್ಸೆಂಬ ಈ ಸುಂದರ ಮನೆಯಲ್ಲಿ ದ್ವೇಷ ಅಸೂಯೆ ಮಾತ್ಸರ್ಯ ತುಂಬಿಕೊಳ್ಳದೆ, ಪ್ರೀತಿ, ಪ್ರೇಮ, ತಾಳ್ಮೆ, ಹೃದಯವಂತಿಕೆ ಇದ್ದರೆ, ಜಗತ್ತನ್ನೇ ಗೆದ್ದು ಬರುವ ಸಾಮರ್ಥ್ಯ ನಮ್ಮಲ್ಲಿ ಮೂಡಬಹುದು

-o-

# ಪ್ರೀತಿಗಾಗಿ ಹಂಬಲಿಸುವ ಮನ

-ಜಯಶ್ರೀ ಕಟ್ಟೇಪುರ

ಪುಟ್ಟ ಪುಟ್ಟ ಹೆಜ್ಜೆ ಇಡುತ್ತಾ, ಮುದ್ದಾಗಿ ಮಾತಾಡುತ್ತಾ, ಆಂಟಿ ನಿಮ್ಮನೆ ಇವತ್ತು ತಿಂಡಿ ಏನು, ಎಂದು ದಿನವೂ, ಬೆಳಗ್ಗೆಯೇ ಮನೆಗೆ ಬರುತ್ತಾ ಇದ್ದ ಆರು ವರ್ಷದ ಚಿನ್ನು, ಅಂದೇಕೊ ಬರಲೇ ಇಲ್ಲ, ನಾನೇ ಹೋಗಿ ಒಮ್ಮೆ ನೋಡಿ ಬರಲೇ ಎನ್ನಿಸಿ ಅವರ ಮನೆಗೆ ಹೋದೆ. ನನಗೂ ಚಿನ್ನು ಅಂದರೆ ತುಂಬಾ ಇಷ್ಟ. ಅಲ್ಲಿ ಬಾಡಿಗೆ ಮನೆ ಹಿಡಿದು ಹೋದಾಗಿನಿಂದ. ಚಿನ್ನು ಅಂದರೆ ಒಂದು ಉತ್ಸಾಹದ ಚಿಲುಮೆ. ಬೆಳಗ್ಗೆ ಒಮ್ಮೆ ನೋಡದಿದ್ದರೆ, ಏನೋ ಕಳೆದುಕೊಂಡ ಭಾವ.

ಮಗು ಜ್ವರದಿಂದ ಬಳಲುತ್ತ ಮಲಗಿತ್ತು. ತೊಡೆಯ ಮೇಲೆ ಮಲಗಿಸಿ ತಟ್ಟುತ್ತಾ ಇದ್ದ, ಮಗುವಿನ ಅಮ್ಮ, ಮೇಘ, ಬನ್ನಿ ಒಳಗೆ ಎಂದು ಕರೆದು, ಮಗುವನ್ನು ರೂಮಿನಲ್ಲಿ ಮಲಗಿಸಿ ಬಂದರು.

ತುಂಬಾ ಮುದ್ದು ಜಾಸ್ತಿ ಅಲ್ವಾ ಈ ಮಗುವಿನ ಮೇಲೆ ನಿಮಗೆ!! ಮಗು ಎಷ್ಟು ಹಠ ಮಾಡಿದರೂ, ಒಮ್ಮೆಯೂ ಕೋಪವೇ ಬರುವುದಿಲ್ಲ, ನಿಮಗೆ ಅಲ್ಲವೇ, ಎಂದೆ. ಅದೇನೋ ಇವಳಲ್ಲಿ ಏನೋ ಆಕರ್ಷಣೆ ನನಗೂ, ಅದೆಷ್ಟು ಮುದ್ದು ಮುದ್ದಾಗಿ ಮಾತಾಡುತ್ತಾಳೆ ಅಲ್ವ!! ಅಂದೆ.



ಅದಕ್ಕವರು, ಇವಳು ಒಂಥರಾ ವಿಶೇಷ ಮಗುವೇ ನನಗೂ.. ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗುವಾಗಿದ್ದರೆ ಕೋಪ ಬರುತ್ತಿತ್ತೇನೋ ಗೊತ್ತಿಲ್ಲ, ಇವಳ ಮೇಲೆ ಕೋಪ ಮಾಡಿಕೊಳ್ಳುವ ಅಧಿಕಾರ ನನಗಿಲ್ಲ, ಎಂದಾಗ, ನಾನು ತುಸು ಗಂಭೀರವಾಗಿಯೇ, ಕೇಳಿದೆ.

ಕ್ಷಮಿಸಿ, ಅಂದರೆ, ಇದು ನಿಮ್ಮ ಮಗು ಅಲ್ಲವೇ!? ಎಂದೆ.

ಅದಕ್ಕೆಲ್ಲ ಕ್ಷಮೆ ಯಾಕೆ, ಎಲ್ಲರೂ ಹಾಗೆ ಅಂದುಕೊಳ್ಳುತ್ತಾರೆ, ಪರವಾಗಿಲ್ಲ, ಬಿಡಿ. ಇವಳ ಹಿಂದೆ ಒಂದು ದೊಡ್ಡ ಕಥೆಯೇ ಇದೆ. ಎಂದು ನಿಟ್ಟುಸಿರು ಬಿಟ್ಟು ಹೇಳಿದರು.

ಇದು ನನ್ನ ಅಕ್ಕನ, ಮಗನ ಮಗು. ಇಲ್ಲೇ ನಮ್ಮ ಮನೆಯ ಮೇಲಿನ ಮನೆಯಲ್ಲೇ ಬಾಡಿಗೆಗೆ ಇದ್ದರು. ಇವಳು ಹುಟ್ಟಿ ಎರಡೇ ತಿಂಗಳಿಗೆ, ಇವಳ ಅಪ್ಪ, ನೇಣು ಹಾಕಿಕೊಂಡ. ಊರಿನಲ್ಲಿ ಇದ್ದ, ಇವಳ ಅಮ್ಮ ಬಾಣಂತಿ, ಮಗುವಿನ ಜೊತೆ ಬಂದವಳು, ಗಂಡನ ಕಾರ್ಯ ಮುಗಿದ ಕೂಡಲೇ, "ನತದೃಷ್ಟ ಮಗು ಇದು, ನನಗೆ ಬೇಡ ಎಂದು ತಿರಸ್ಕರಿಸಿ, ಹೇಳದೆ ಕೇಳದೆ, ಪತ್ರ ಬರೆದಿಟ್ಟು, ಹೊರಟೆ ಹೋದಳು ನಿರ್ದಯಿಯಾಗಿ".

ಅರವತ್ತೈದು, ದಾಟಿದ, ನನ್ನ ಅಕ್ಕ, ಅಳುತ್ತಾ, ಮಗುವನ್ನು ತಂದು, ನಾನೇನು ಮಾಡಲಿ, ಯಾವುದಾದರೂ, ಆಶ್ರಮಕ್ಕೆ ಸೇರಿಸಿ, ನನ್ನನ್ನು ಮತ್ತು ಇವಳನ್ನು, ಎಂದು, ನಮ್ಮ ಮನೆಯವರ, ಮಡಿಲಿಗೆ ಹಾಕಿ ಅಳುತ್ತಾ ನಿಂತಳು, ಅಸಹಾಯಕತೆಯಿಂದ ದಿಕ್ಕೇ ತೋಚದಾಗಿ. ಅವಳಿಗೆ ಮಗನ ಆಸರೆ ಬಿಟ್ಟು ಬೇರೆ ಏನು ಇರಲಿಲ್ಲ.

ನಾನು ಏನು ಹೇಳಲು ತೋಚದೆ ಇದ್ದೆ. ನನಗೂ ಎರಡು ಹೆಣ್ಣುಮಕ್ಕಳು. ಅಂಥ ಸ್ಥಿತಿವಂತರು ನಾವಲ್ಲ. ಮುಂದೇನು ಎಂಬ ಚಿಂತೆ. ಮಗುವನ್ನು ಎತ್ತಿ ಮುದ್ದಿಸಿ,

ಅಕ್ಕ ಅಳಬೇಡ!! ದೇವರು ಯಾವುದಾದ್ರೂ, ಒಳ್ಳೆ ದಾರಿ ತೋರಿಸುತ್ತಾನೆ. ಒಂದೆರಡು ದಿನ ನಮ್ಮ ಮನೆಯಲ್ಲೇ, ಇರು. ಮುಂದೆ ಏನು ಎಂದು ಯೋಚಿಸೋಣ ಎಂದೆ.

ರಾತ್ರಿಯಾಯಿತು. ಮಗು ತಾಯಿ ಹಾಲು ಕಾಣದೆ, ಅಳುತ್ತಾ ಇರುವುದು ನೋಡಲು ಆಗ್ತಾ ಇರಲಿಲ್ಲ, ಕರುಳು ಕಿತ್ತು ಬರುವಂತೆ, ಆಯ್ತು. ಚಮಚದಲ್ಲಿ, ಹಾಲು ಕುಡಿಯಲು, ಮಗು ಬಾಯಿ ಬಿಡುತ್ತಾ ಇರಲಿಲ್ಲ. ಬೆಳಿಗ್ಗೆ ಆದ ತಕ್ಷಣ, ಒಂದು ಬಾಟಲ್ ತಂದು, ಮಗುವಿಗೆ ಹಾಲು ಕುಡಿಸಿದ್ದು ಆಯ್ತು.

ನಮ್ಮ ಯಜಮಾನರು ದೇವರಂತಹ ಮನುಷ್ಯರು.
ನಾನು ಮುಂದೇನು ಈ ಮಗುವನ್ನು ಏನು ಮಾಡುವುದು ಯಾರಾದರೂ, ದತ್ತು ತೆಗೆದು ಕೊಳ್ಳುವವರು ಸಿಕ್ಕಿದರೆ ವಾಸಿ, ಆಶ್ರಮ ಬೇಡ ಅನ್ನಿಸುತ್ತೆ ಎಂದೆ.

ಅದಕ್ಕವರು, ಮೇಘು, ಒಂದು ಹಿಡಿ ಪ್ರೀತಿಗಾಗಿ ಹಂಬಲಿಸುವ ಈ ಮಗುವಿಗೆ, ಅನಾಥಾಶ್ರಮದಲ್ಲಿ, ಊಟ ಬಟ್ಟೆ ಸಿಗಬಹುದು. ಅಪ್ಪ ಅಮ್ಮನ ಪ್ರೀತಿ ಸಿಗುವುದೇ!!? ಈಗ ಉಳಿದಿರುವುದು ಒಂದೇ ದಾರಿ. ಇದು, ನಮ್ಮ ಮೂರನೆಯ ಮಗು. ಇನ್ನುಮುಂದೆ, ಇವಳಿಗೂ, ನೀನೇ ಅಮ್ಮ ಎಂದಾಗ, ನಾನು ನಿಜಕ್ಕೂ ಇದನ್ನು ಊಹಿಸಿರಲಿಲ್ಲ, ಎರಡು ಹೆಣ್ಣು ಹುಟ್ಟಿದಾಗಲೇ, ಎಲ್ಲರಿಂದ, ಕುಚೋದ್ಯಕ್ಕೆ ಒಳಗಾದ ಇವರ ಬಾಯಿಂದ ಇಂಥ ಮಾತು ನಾನು ನಿಜವಾಗಿಯೂ ನಿರೀಕ್ಷಿಸಿಯೇ ಇರಲಿಲ್ಲ.

ಅಂದಿನಿಂದ, ಅಕ್ಕ ಮತ್ತು ಮಗು ಇಬ್ಬರೂ ನಮ್ಮ ಮನೆಯಲ್ಲಿಯೇ ಇದ್ದಾರೆ. ನನ್ನ ಹೆತ್ತ ಮಕ್ಕಳಿಗಿಂತ, ಇದರ ಮೇಲೆ ಹೆಚ್ಚು ಪ್ರೀತಿ ನಮ್ಮ ಮನೆಯವರಿಗೆ, ಅದಕ್ಕೆ ಯಾವ ಕೊರತೆಯೂ ಆಗಬಾರದು ಎನ್ನುತ್ತಾರೆ. ನನ್ನ ಮಕ್ಕಳಿಗೆ ಎಲ್ಲವೂ ತಿಳಿದಿರುವುದರಿಂದ, ಅವರಿಬ್ಬರೂ, ಇವಳನ್ನು ತಮ್ಮ ಪುಟ್ಟ ತಂಗಿ ಎಂದೆ ತಿಳಿದು, ಪ್ರೀತಿಯ ಧಾರೆಯನ್ನೇ ಎರೆದಿದ್ದಾರೆ. ಚಿನ್ನು ನಮ್ಮೆಲ್ಲರ ಮುದ್ದಿನ ರಾಜಕುಮಾರಿ. ನಮ್ಮೆಲ್ಲರ ಚೈತನ್ಯದ ಚಿಲುಮೆ, ಭಗವಂತ ಕಳಿಸಿದ ಉಡುಗೊರೆ ಎಂದೆ ಸ್ವೀಕಾರ ಮಾಡಿದ್ದೇವೆ ಎಂದರು.

ಪ್ರೀತಿಯ ಮತ್ತೊಂದು ಮುಖದ ಪರಿಚಯವಾಯಿತು. "ನಿಜವಾಗಿಯೂ ನೀವು ಪ್ರಾತಃ ಸ್ಮರಣೀಯರು" ಎಂದು ಹೇಳಿ ಅಲ್ಲಿಂದ ಹೊರಬಂದೆ. ಈಗಲೂ ಇಂಥ ಒಳ್ಳೆಯ ಮನಸ್ಸಿನ ಸಹೃದಯರು ನಮ್ಮ ಸುತ್ತಮುತ್ತ ಇದ್ದಾರೆ.

ಸಾಮಾನ್ಯ ಜನರು ಮಾಡುವ ಇಂಥ ತ್ಯಾಗ ಯಾರಿಗೂ ಗೋಚರಿಸುವುದೇ ಇಲ್ಲ, ಯಾಕೆ !!? ಎಂಬ ಪ್ರಶ್ನೆ ಕಾಡುತ್ತಲೇ ಇರುತ್ತದೆ.(ಸತ್ಯ ಘಟನೆ).

-o-

## ಆತ್ಮತೃಪ್ತಿ

-ವಿಜಯಲಕ್ಷ್ಮಿ ನಾಗಯ್ಯ

ಒಂದೇ ಒಂದು ಸರಿಯಾದ ನಿರ್ಧಾರ ಮಾಡಿ .
ಆ ನಿರ್ಧಾರ ಕೆಲವರಿಗೆ ತೃಪ್ತಿಪಡಿಸುತ್ತದೆ,
ಇನ್ನೂ ಕೆಲವರಿಗೆ ಆಶ್ಚರ್ಯಪಡಿಸುತ್ತದೆ.
ಇನ್ನೂ ಕೆಲವರಿಗೆ ಕೋಪ ಬರಿಸುತ್ತದೆ.
ಅದು ಏನೇ ಇರಲಿ, ಅದರಿಂದ ನಿಮಗೆ ಸಂತೋಷ ಸಿಕ್ಕರೆ ಸಾಕು.

-o-



# ಜಾತ್ರೆಯ ಸಂಭ್ರಮ

-ಸುಮ ಉಮೇಶ್

ಜಾತ್ರೆ ಅನ್ನೋದು ಕೇವಲ ಸಂಭ್ರಮ ಮಾತ್ರವಲ್ಲ. ಭಕ್ತಿ ಸೌಹಾರ್ದತೆ, ಧಾರ್ಮಿಕತೆ, ಭಾವೈಕ್ಯತೆಯ ಸಂಕೇತವಾಗಿರುತ್ತದೆ. ಒಂದಿಡೀ ಊರಿನ ಆಚರಣೆ ಅಷ್ಟೇ ಅಲ್ಲದೆ ಬೇರೆ ಬೇರೆ ಊರು ಮತ್ತು ಹಳ್ಳಿಗಳನ್ನು ಬೆಸೆಯುವ ಕೊಂಡಿಯಾಗಿರುತ್ತದೆ. ಇದು ಒಂದು ಮನೆಯ ಹಬ್ಬವಲ್ಲ. ಗ್ರಾಮದೇವತೆಯ ಆರಾಧನೆಯ ನೆಪದಲ್ಲಿ ಇಡೀ ಊರಿಗೆ ಊರೇ ತಲೆತಲಾಂತರಗಳಿಂದ ಆಚರಿಸಿಕೊಂಡು ಬಂದ ಸಂಪ್ರದಾಯ. ಪೂಜೆ ನೇಮಗಳನ್ನು ಪಾಲಿಸುವಲ್ಲಿ ಅತೀವ ಆಸಕ್ತಿ ಭಯಭಕ್ತಿಗಳಿಂದ ಜನರು ಕೈ ಜೋಡಿಸುತ್ತಾರೆ. ಆ ಊರಿನ ಜನರಷ್ಟೇ ಅಲ್ಲದೆ ಸುತ್ತಮುತ್ತಲಿನ ಎಲ್ಲ ಹಳ್ಳಿಗಳಿಂದ ತಂಡೋಪತಂಡವಾಗಿ ಆಗಮಿಸಿ ಪಾಲ್ಗೊಳ್ಳುವ ವಿಜೃಂಭಣೆಯ ಆಚರಣೆ ಇದಾಗಿದೆ.



ಬೀಗರ ಮನೆಗಳಿಗೆ ತಿಂಗಳ ಮುಂಚೆ ಹೇಳಿಕೆ ಹೋಗುತ್ತದೆ. ನಗರದಲ್ಲಿ ಕೆಲಸದಲ್ಲಿರುವ ಮನೆ ಮಕ್ಕಳು ತನ್ನ ಹುಟ್ಟಿದೂರಿನ ಜಾತ್ರೆಗೆ ತಿಂಗಳ ಮುಂಚೆಯೆ ನಿಗದಿತ ದಿನಾಂಕಕ್ಕೆ ರಜಾ ಚೀಟಿ ಬರೆದಿಟ್ಟು ರಜೆ ಖಾಯಂ ಮಾಡಿಕೊಳ್ಳುತ್ತಾರೆ. ಊರಿನ ಮುಖ್ಯಸ್ಥರು ವಂತಿಗೆ ಸಂಗ್ರಹಿಸುವಲ್ಲಿ ನಿರತರಾಗಿರುತ್ತಾರೆ. ಇನ್ನು ಈ ಜಾತ್ರೆ ಸಾಮಾನ್ಯವಾಗಿ ಬರುವುದೇ ಬೇಸಿಗೆಯಲ್ಲಿ. ಮಕ್ಕಳು ಯಾವಾಗ ಪರೀಕ್ಷೆ ಮುಗಿಯುತ್ತೋ ಎಂದು ಕಾತರದಿಂದ ಕಾಯುವಂತೆ ಆಗುತ್ತದೆ. ಹೆಣ್ಣುಮಕ್ಕಳು, ಅಣ್ಣತಮ್ಮಂದಿರು, ಮೊಮ್ಮಕ್ಕಳು, ಅಕ್ಕತಂಗಿಯರು, ಬೀಗರು, ಪಟ್ಟಣದಲ್ಲಿ ಓದುತ್ತಿರುವ ಮಕ್ಕಳು ಮನೆಗೆ ಬರುವರೆಂದು ವಾರಕ್ಕೆ ಮುಂಚೆಯೇ ಮನೆ ಮನೆಯಲ್ಲೂ ಹಬ್ಬದ ಸಂಭ್ರಮ ಮನೆ ಮಾಡಿರುತ್ತದೆ. ತಿಂಗಳ ಮುಂಚೆಯೇ ಊರಿಗೆ ಊರೇ ಸುಣ್ಣ ಬಣ್ಣಗಳಿಂದ ಅಲಂಕೃತಗೊಂಡು ಬರುವವರ ಸ್ವಾಗತಕ್ಕೆ ಸಿದ್ಧವಾಗುತ್ತದೆ. ಮನೆಯ ಹೆಂಗಸರು ಹೆಚ್ಚುವರಿ ತಿಂಡಿ ತಿನಿಸುಗಳನ್ನು ಸ್ವಲ್ಪವೂ ಬೇಸರಿಸದೆ ಹೆಚ್ಚಿನ ಪ್ರಮಾಣದಲ್ಲಿ ತಯಾರಿಸಿ ಡಬ್ಬಗಳಲ್ಲಿ ಜೋಪಾನವಾಗಿ ಎತ್ತಿಡುತ್ತಾರೆ. ಹೊಸ ಬಟ್ಟೆ, ಸೀರೆಗಳ ಖರೀದಿಗೆ ಜಾತ್ರೆ ನೆಪವಾಗುತ್ತದೆ. ಅಪಾರ ಬಂಧು ಬಳಗ ನೆಂಟರಿಷ್ಟರ ಆಗಮನ ಊರಿಗೆ ಊರೇ ಕಳೆಗಟ್ಟುತ್ತದೆ. ಗಂಡು ಹೆಣ್ಣನ್ನು ತೋರಿಸುವುದು, ಎಷ್ಟೋ ಮದುವೆಗಳ ಮಾತುಕತೆಗಳಿಗೆ ಜಾತ್ರೆಯ ಶುಭಸಂದರ್ಭ ಸಾಕ್ಷಿಯಾಗುತ್ತದೆ.

ಇನ್ನೇನು ತೇರಿನ ದಿನ ಬಂದೇ ಬಿಟ್ಟಿತು. ವಿಶೇಷವಾಗಿ ಅಲಂಕರಿಸಿದ ರಥದಲ್ಲಿ ಊರಿನ ಮುಖ್ಯದೇವತೆಯನ್ನು ಕುಳ್ಳಿರಿಸಿ ಎಲ್ಲಾ ತರದ ಹೂವುಗಳಿಂದ ಅಲಂಕರಿಸುತ್ತಾರೆ. ಸುತ್ತಮುತ್ತಲ ರೈತರ ತೋಟದ ಹೂವುಗಳೆಲ್ಲ ದೇವರ ಮತ್ತು ತೇರಿನ ಅಲಂಕಾರಕ್ಕೆ ಮೀಸಲಾಗಿರುತ್ತದೆ. ನಿಶ್ಚಯಿಸಿದ ಶುಭಮುಹೂರ್ತದಲ್ಲಿ ಊರಿನ ಮುಖ್ಯಸ್ಥರು ಉತ್ಸವಮೂರ್ತಿಗೆ ಅರಿಶಿನ ಕುಂಕುಮ, ಗಂಧಾಕ್ಷತೆಗಳಿಂದ ಪೂಜಿಸಿ, ಧೂಪದೀಪ ಬೆಳಗಿಸಿ, ಹಣ್ಣು ಕಾಯಿ ನೈವೇದ್ಯ ಮಾಡಿ, ಈಡುಗಾಯಿ ಒಡೆದು ದೇವಸ್ಥಾನದ ಸಮಿತಿಯ ನೇತೃತ್ವದಲ್ಲಿ ಇದಕ್ಕಾಗಿಯೇ ತಯಾರಿಸಿದ ಮಜಬೂತಾದ ಹಗ್ಗವನ್ನು ತೇರಿಗೆ ಕಟ್ಟಿ ಎಳೆಯುವುದರ ಮೂಲಕ ಜಾತ್ರೆಗೆ ವಿದ್ಯುಕ್ತವಾಗಿ ಚಾಲನೆ ಕೊಡುತ್ತಾರೆ. ಎಲ್ಲರ ಬಾಯಲ್ಲೂ ದೇವದೇವತೆಗಳ ನಾಮಸ್ಮರಣೆ, ಉದ್ಘೋಷ, ಉದ್ಗಾರದೊಡನೆ ತೇರಿಗೆ ಬಾಳೆಹಣ್ಣು, ಉತ್ತುತ್ತಿ, ಹೂವು, ಅಕ್ಷತೆ ತೂರುತ್ತಾ ಪ್ರತಿಯೊಬ್ಬರೂ ಹಗ್ಗ ಹಿಡಿದು ಎಳೆದು ಪುನೀತರಾಗುತ್ತಾರೆ. ಇದೇ ಸಂದರ್ಭದಲ್ಲಿ ಹುಡುಗರ ಗುಂಪು ಪೈಪೋಟಿಯ ಮೇಲೆ ಎತ್ತರೆತ್ತರಕ್ಕೆ ಬಾಳೆಹಣ್ಣು ಹೂವು ತೂರುತ್ತಾರೆ. ಅವಕಾಶವನ್ನು ಸರಿಯಾಗಿಯೆ ಉಪಯೋಗಿಸಿಕೊಂಡು ಜನಜಂಗುಳಿಯ ನಡುವೆಯೂ ಯಾರಿಗೂ ಕಾಣದ ಹಾಗೇ ಒಬ್ಬರ ಮೇಲೆ ಒಬ್ಬರು ಹೂವು ಎಸೆದು ಪುಳಕಗೊಳ್ಳುವ ಯುವ ಪ್ರೇಮಿಗಳಿಗೇನು ಕಡಿಮೆಯಿಲ್ಲ ಅನ್ನಿಸುತ್ತೆ. ಮುರಿದ ಎಷ್ಟೋ ಮನಗಳು ಜಾತ್ರೆಯ ನೆಪದಲ್ಲಿ ಮತ್ತೆ ಒಂದಾಗುತ್ತವೆ.

ಊರ ಮುಖ್ಯಸ್ಥರ ಮನೆಯ ಹೆಣ್ಣುಮಕ್ಕಳು, ಸೊಸೆಯರ ಭಾರಿ ಭಾರಿ ರೇಷ್ಮೆ ಸೀರೆಗಳು, ಕಣ್ಣು ಕೋರೈಸುವ ಕಾಸಿನ ಸರ, ಡಾಬು, ವಂಕಿಗಳು ಅಂದಿನ ಬಹುಮುಖ್ಯ ಚರ್ಚೆಯ ವಿಷಯವಾಗುತ್ತದೆ ಉಳಿದ ಹೆಂಗೆಳೆಯರಿಗೆ. ಚಿಕ್ಕ ಮಕ್ಕಳನ್ನು ತೇರು ಸಾಗುವ ದಾರಿಯಲ್ಲಿ ಮಲಗಿಸಿದರೆ ದೀರ್ಘಾಯುಷ್ಯ ಹೊಂದಿ ಮಕ್ಕಳು ಯಶೋವಂತರಾಗಿ ಕೀರ್ತಿವಂತರಾಗಿ, ದೇವರ ಆಶೀರ್ವಾದ ಸದಾ ಇರುತ್ತದೆ ಎನ್ನುವ ನಂಬಿಕೆ ಕೂಡಾ ಇದೆ. ಮಕ್ಕಳು ಭಯದಿಂದ ಹೋ ಎಂದು ಅಳುವುದನ್ನು ಲೆಕ್ಕಿಸದ ಮನೆಯ ಗಂಡಸರು ಮಗುವನ್ನು ಜೋಪಾನವಾಗಿ ಮಲಗಿಸಿ ತೇರು ಮುಂದೆ ಸಾಗಿದ ಮೇಲೆ ಎತ್ತಿಕೊಳ್ಳುತ್ತಾರೆ. ಹಳ್ಳಿಯ ದೊಡ್ಡ ರಸ್ತೆಯಲ್ಲಿ ಒಂದಷ್ಟು ದೂರ ಕ್ರಮಿಸಿದ ಮೇಲೆ ರಥ ಮತ್ತೆ ಸ್ವಸ್ಥಾನ ಸೇರುತ್ತದೆ. ಮನೆಯಲ್ಲಿ ಹಬ್ಬದಡಿಗೆ ನೈವೇದ್ಯ ಮುಗಿಸಿ ತಡವಾಗಿ ಬರುವ ಕೆಲವು ಮಂದಿ ದೇವರನ್ನು ಕಣ್ತುಂಬಿಕೊಂಡು ಹಣ್ಣುಕಾಯಿ ಮಾಡಿಸಿ ಪಾವನರಾಗುತ್ತಾರೆ.

ಸೂರ್ಯ ನೆತ್ತಿಯ ಮೇಲೆ ಬರುವ ಹೊತ್ತಿಗೆ ಜನರು ಸಾಗುವ ಇಕ್ಕೆಲದಲ್ಲಿ ಪಾನಕ, ಮಜ್ಜಿಗೆ, ಕೋಸಂಬರಿಗಳು ಯಾವುದೇ ಭೇದ ಭಾವವಿಲ್ಲದೆ ಎಲ್ಲರಿಗೂ ಉಚಿತವಾಗಿ ವಿತರಣೆ ಆಗುತ್ತದೆ. ಇದಕ್ಕಾಗಿಯೇ ಕೆಲವು ಮನೆಯವರು ತಾವು ಇಂತಿಂಥ ಸೇವೆ ಒದಗಿಸುತ್ತೇವೆ ಎಂದು ಸ್ವಪ್ರೇರಣೆಯಿಂದ ಮುಂದೆ ಬಂದಿರುತ್ತಾರೆ. ಏಲಕ್ಕಿ ನಿಂಬೆಹಣ್ಣಿನ ಪಾನಕ, ಸಾಸಿವೆ, ಉಪ್ಪು, ಹಸಿಮೆಣಸು, ಶುಂಠಿ, ಕೊತ್ತಂಬರಿ, ಕರಿಬೇವಿನಿಂದ ಮಿಶ್ರಿತ ನೀರು ಮಜ್ಜಿಗೆ ಬಾಯಾರಿದ ಗಂಟಲಿಗೆ ಅಮೃತ ಸಮಾನವಾದರೆ, ಹೆಸರುಬೇಳೆ ಮತ್ತು ಸೌತೆಕಾಯಿಯ ಕೋಸಂಬರಿ ಹಸಿದ ಹೊಟ್ಟೆಗೆ ತಾತ್ಕಾಲಿಕ ಉಪಶಮನ ಕೊಡುತ್ತದೆ. ಮಧ್ಯಾಹ್ನ ಸಾಮೂಹಿಕ ಅನ್ನ ಸಂತರ್ಪಣೆಯಲ್ಲಿ ಕೆಲವರು ಪಾಲ್ಗೊಂಡರೆ ಕೆಲವರು ಮನೆಯಲ್ಲಿ ತಯಾರಿಸಿದ ಹೋಳಿಗೆ ಊಟ ಮಾಡಲು ದೌಡಾಯಿಸುತ್ತಾರೆ. ಇದಿಷ್ಟು ತೇರಿನ ಸಂಭ್ರಮವಾಯಿತು.

ಸಂಜೆಗೆ ಮತ್ತೆ ಕಾಲುಗಳು ಅಂಗಡಿಗಳ ಸಾಲುಗಳ ಕಡೆಗೆ ಹೊರಡುತ್ತವೆ. ಇಲ್ಲಿ ಏನುಂಟು ಏನಿಲ್ಲ?? ತಾತ್ಕಾಲಿಕವಾಗಿ ನಿರ್ಮಿಸಿದ ಅಂಗಡಿಗಳಲ್ಲಿ ಮಂಡಕ್ಕಿ, ಬೆಂಡು, ಬತ್ತಾಸು, ದೊಡ್ಡ ಹಪ್ಪಳ, ಮೆಣಸಿನಕಾಯಿ ಬೋಂಡ, ಗಿಲೀಟಿನ ಒಡವೆಗಳು, ಬಣ್ಣಬಣ್ಣದ ಗಾಜಿನ ಬಳೆಗಳು, ಮಕ್ಕಳ ಆಟಿಕೆಗಳು, ವಸ್ತ್ರಗಳ ಮಳಿಗೆ, ಪುಸ್ತಕ ಮಳಿಗೆ, ದೇವರ ಪಟಗಳು... ಹೀಗೆ ನಾನಾತರದ ವ್ಯಾಪಾರ ವಹಿವಾಟು ಮಾರಾಟಗಾರರಿಗೆ ಚೆನ್ನಾಗಿಯೇ ಲಾಭ ತಂದು ಕೊಡುತ್ತವೆ.

ಜಾತ್ರೆ ಎಂದರೆ ಬರೀ ಖುಶಿ ಸಂಭ್ರಮ ಎನ್ನುವ ಒಂದು ಮುಖವಷ್ಟೆ ನಾವೆಲ್ಲಾ ಇಷ್ಟು ಹೊತ್ತು ಓದಿದ್ದು. ಈಗ ಇದರ ಇನ್ನೊಂದು ಮಗ್ಗುಲು ಕೂಡಾ ಓದಿ. ಯಾರದೋ ದುಡ್ಡು ಎಲ್ಲಮ್ಮನ ಜಾತ್ರೆ ಅಂತ ಗಾದೆಯೇ ಇದೆ. ಹಾಗೆಯೇ ಜಾತ್ರೆಗೆ ಹಣ ಸಂಗ್ರಹಿಸುವ ನೆಪದಲ್ಲಿ ತಮ್ಮ ಜೇಬು ಭರ್ತಿ ಮಾಡಿಕೊಳ್ಳುವ ಮಂದಿಗೇನು ಕಡಿಮೆಯಿರಲ್ಲ. ಜೂಜು, ಇಸ್ಪೀಟು, ಕುಡಿತ ಜಾತ್ರೆಯ ಒಂದು ಅವಿಭಾಜ್ಯ ಅಂಗವಾಗಿರುತ್ತದೆ ಎನ್ನುವುದು ಸುಳ್ಳಲ್ಲ. ಕಳ್ಳತನ, ಜಗಳ, ಮನಸ್ತಾಪ..ಒಮ್ಮೊಮ್ಮೆ ಹೊಡೆದಾಟ ಬಡಿದಾಟಗಳು ಕೊಲೆಯ ಹಂತದವರೆಗೂ ಹೋಗಿ ಜಾತ್ರೆ ಅನ್ನೋದು ಕಹಿ ನೆನಪಾಗಿ ಜನಮಾನಸದಲ್ಲಿ ಉಳಿದು ಹೋಗುತ್ತದೆ. ಅಲ್ಲೊಂದು ಇಲ್ಲೊಂದು ಅತ್ಯಾಚಾರದ ಪ್ರಕರಣಗಳು ಹೆಣ್ಣು ಮಕ್ಕಳನ್ನು ಜಾತ್ರೆಗೆ ಕಳಿಸಲು ಹೆದರುವಂತೆ ಆಗುತ್ತದೆ. ಆರಕ್ಷಕರಿಗೆ ಸಾಕಷ್ಟು ಕೈ ಬೆಚ್ಚಗೆ ಮಾಡಿ ಇಂಥ ಪ್ರಕರಣಗಳನ್ನು ಮುಚ್ಚಿಹಾಕುವ ಪಾಪಿಗಳು ಇದ್ದೆ ಇರುತ್ತಾರೆ. ಎಲ್ಲರೂ ಜಾತ್ರೆಗೆ ಹೋಗುವ ಸಮಯವನ್ನೇ ಕಾಯುವ ಕಳ್ಳಕಾಕರು ಯಾರೂ ಇಲ್ಲದ ಮನೆಗಳ ಬೀಗ ಒಡೆದು ದೋಚಿ ಇದೇ ಸಮಯದಲ್ಲಿ ತಮ್ಮ ಬೇಳೆ ಬೇಯಿಸಿ ಕೊಳ್ಳುತ್ತಾರೆ. ನೂರಾರು ಸಾವಿರಾರು ಜನರು ಸೇರುವ ಕಡೆ ಸಾಂಕ್ರಾಮಿಕ ರೋಗದ ಹರಡುವಿಕೆಯು ತೀವ್ರವಾಗಿರುತ್ತದೆ. ಬಿಸಿಲಿಗೆ ತಲೆ ತಿರುಗಿ ಬೀಳುವುದು, ಊಟದಲ್ಲಿ ಹೆಚ್ಚು ಕಮ್ಮಿ ಆಗಿ ವಾಂತಿ, ಅತಿಸಾರ ಇವೂ ಸಾಮಾನ್ಯವಾಗಿರುತ್ತದೆ. ನೈರ್ಮಲ್ಯದ ಕೊರತೆಯಿಂದ ಸೊಳ್ಳೆ ನೊಣಗಳ ಹಾವಳಿ ಮಿತಿ ಮೀರುತ್ತದೆ.

ಇನ್ನು ಬಡ ಜನರ ಗೋಳು ಹೇಳತೀರದು. ಆಡುವ ಹಾಗಿಲ್ಲ..ಅನುಭವಿಸದೆ ವಿಧಿ ಇಲ್ಲ. ಜಾತ್ರೆಗೆ ಹಣ ಹೊಂಚುವುದೇ ಒಂದು ದುಃಸ್ವಪ್ನದ ಹಾಗೆ ಕಾಡುತ್ತದೆ ಪಾಪ. ಮನೆಯ ಗಂಡಸರಿಗೆ ವಾರಕ್ಕೆ ಮುಂಚೆ ಮನೆಗೆ ಬರುವ ನೆಂಟರು, ಹೆಣ್ಣುಮಕ್ಕಳು, ಅಳಿಯಂದಿರು, ಮೊಮ್ಮೊಕ್ಕಳು ಇವರೆಲ್ಲರ ಊಟ ತಿಂಡಿಯ ಖರ್ಚು, ಹೆಚ್ಚುವರಿ ಹಾಲು ಮೊಸರು ತುಪ್ಪ ಹೊಂಚುವಲ್ಲಿ ಹೈರಾಣಾಗುತ್ತಾರೆ.ಮನೆಯ ಹೆಂಗಸರಿಗೆ ಬಂದವರ ಚಾಕರಿ ಮಾಡಿ ಮಾಡಿ ಸೋತು ಸುಣ್ಣವಾಗಿ ಯಾಕಾದರೂ ಈ ಜಾತ್ರೆ ಬರುತ್ತಪ್ಪ ಅನ್ನಿಸುತ್ತೆ. ಪರೀಕ್ಷೆ ಇನ್ನೇನು ಒಂದು ವಾರವಿದೆ ಎನ್ನುವಾಗ

ಕೆಲವು ಜಾತ್ರೆಗಳು ಬರುತ್ತವೆ. ಮನೆಯಲ್ಲಿ ಓದುವ ಮಕ್ಕಳಿದ್ದರೆ ಅವರ ಪಾಡಂತೂ ಕೇಳುವುದೇ ಬೇಡ. ಬಂದವರ ಸೇವೆಗೆ ಈ ಮಕ್ಕಳೇ ಬೇಕೂ. ಪುಸ್ತಕ ಹಿಡಿದು ಕೂತರೆ ಹಂಡೆಗೆ ನೀರು ತುಂಬು, ಚೀರಣ್ಣನ ಮನೆಗೆ

ಹೋಗಿ ಹಾಲು ತಗೊಂಡು ಬಾ, ರಂಗೋಲಿ ಹಾಕು ಎಂದು ಪೀಡಿಸುತ್ತಾರೆ. ಯುವತಿಯರಿಗೆ ಬಟ್ಟೆ ಒಗೆಯುವುದು, ರಾಶಿ ರಾಶಿ ಪಾತ್ರೆ ತಿಕ್ಕುವುದು, ಹೂವು ಕಟ್ಟುವ ಕೆಲಸ. ದೊಡ್ಡ ಮಹಿಳೆಯರಿಗೆ ಅಡುಗೆ ಮನೆಯ ಉಸ್ತುವಾರಿ. ಒಲೆ ಆರಿಸುವ ಹಾಗೇ ಇಲ್ಲ. ಕಾಫಿ ಟೀ, ಕುರುಕಲು ಒದಗಿಸಿ ಸುಸ್ತಾಗುತ್ತಾರೆ. ಜಾತ್ರೆಗೆ ಬಂದ ಕೆಲವರಿಗೆ ಸಮಾರಾಧನೆ ಊಟ ಬೇಡ. ಇವರಿಗೆ ಮನೆಯಲ್ಲಿ ಮಾಡುವ ಮೆತ್ತನೆ ಅನ್ನವೇ ಬೇಕು. ಸಕ್ಕರೆ ಇಲ್ಲದ ಕಾಫಿ ಟೀ, ಹೆಚ್ಚು ಸಕ್ಕರೆ ಹಾಕಿದ ಕಾಫೀ ಟೀ, ಕಾದಾರಿದ ನೀರು, ಸಣ್ಣ ಪುಟ್ಟ ನೆಗಡಿ ಕೆಮ್ಮು ಜ್ವರಕ್ಕೆ ಕಷಾಯ, ಮಹಿಳೆಯರು ಸೀರೆಯುಟ್ಟು ತಯಾರಾಗಲು, ಹೂ ಮುಡಿಯಲು ಸೇಫ್ಟಿ ಪಿನ್ನು, ಹೇರ್ ಪಿನ್ನು ಕೂಡಾ ಒದಗಿಸುವುದು ಮನೆಯವರ ಆದ್ಯ ಕರ್ತವ್ಯ ಎಂಬ ಭಾವನೆ ಬಂದವರಿಗೆ.

ಹೀಗೆ ಬರೀ ಬಂದವರ ಸೇವೆಯಲ್ಲಿ ತೊಡಗಿಸಿಕೊಂಡ, ನನಗೆ ಪರಿಚಯದ ಊರಿನ ಹಿರಿಯ ಮಹಿಳೆಯೊಬ್ಬರು ಮದುವೆಯಾಗಿ ಐವತ್ತು ವರ್ಷವಾದರೂ ಒಮ್ಮೆಯೂ ತೇರಿನ ಸಮಯಕ್ಕೆ ನಾನು ಹೋಗಿಯೇ ಇಲ್ಲ ಎನ್ನುತ್ತಾರೆ. ಕಾರಣ ಇವರ ಮನೆಯಲ್ಲಿ ತೇರಿನ ದಿನ ಸುಮಾರು ನಲವತ್ತು ಐವತ್ತು ಜನಕ್ಕೆ ಸ್ನಾನ, ತಿಂಡಿ, ಸಾಮೂಹಿಕ ಊಟಾ ಒಲ್ಲೆ ಅನ್ನುವವರಿಗೆ ಊಟದ ವ್ಯವಸ್ಥೆ, ಮಧ್ಯೆ ಮಧ್ಯೆ ಕಾಫಿ ಟೀಪಾನಕ ಮಜ್ಜಿಗೆ, ಚಿಕ್ಕಮಕ್ಕಳಿಗೆ ಹಾಲು, ಆಗ ತಾನೇ ಅನ್ನ ತಿನ್ನಲು ಶುರು ಮಾಡಿದ ಮಕ್ಕಳಿಗೆ ಮೆತ್ತನೆಯ ಅನ್ನ..ಇಷ್ಟೆಲ್ಲವನ್ನೂ ಚಾಚೂ ತಪ್ಪದೆ ನೋಡಿ ಕೊಳ್ಳಬೇಕು. ಅತಿಥಿ ಸತ್ಕಾರದಲ್ಲಿ ಚೂರು ಏರುಪೇರಾದರೂ ಗಂಡಸರ ಕೆಂಗಣ್ಣಿಗೆ ಗುರಿಯಾಗಬೇಕು. ಇದರ ಮಧ್ಯೆ ವಾರದಿಂದ ಮಾಡಿದ ಕೋಡುಬಳೆ ಚಕ್ಕುಲಿ ಎಲ್ಲರಿಗೂ ಆಗಾಗ ಬಾಯಾಡಿಸಲು ಕೊಡಬೇಕು. ಊರಿಗೆ ಹೊರಡುವವವರಿಗೆ ಉಪ್ಪಿನಕಾಯಿ, ಮಾವಿನಕಾಯಿ, ನಿಂಬೆಹಣ್ಣು, ಕರಿಬೇವಿನಿಂದ ಮೊದಲ್ಗೊಂಡೂ, ಬೆಣ್ಣೆ, ಕೊಬ್ಬರಿ, ಹಲಸು, ಬೆಳೆದಿದ್ದು, ಕೊಂಡಿದ್ದು, ಹುಣಸೆ ತೊಕ್ಕು, ಅಡಿಕೆ, ರಾಗಿ ಎಲ್ಲವನ್ನೂ ಪ್ರತ್ಯೇಕ ಚೀಲಗಳಿಗೆ ಹಾಕಿ ಕೊಡಬೇಕು. ಇಷ್ಟೆಲ್ಲವನ್ನೂ ನಗುನಗುತ್ತಾ ಮಾಡಿ , ಮತ್ತೆ ಮುಂದಿನ ಜಾತ್ರೆಯನ್ನು ಬರಮಾಡಿಕೊಳ್ಳಲು ಅಷ್ಟೇ ಉತ್ಸಾಹ ತೋರುವ ಇಂಥ ಎಲ್ಲ ಮಹಿಳೆಯರಿಗೂ ನನ್ನದೊಂದು ಗೌರವಯುತ ನಮನ ಅರ್ಪಿಸುತ್ತೇನೆ.

ಗಂಡನ ಕಡೆಯವರಿಗೆ ಅತಿಯಾಗಿ ಓಲೈಸುತ್ತ, ಅವರಿಗೇ ಹೆಚ್ಚು ಗಮನ ಕೊಡುತ್ತಾ ತನ್ನ ತವರಿನವರನ್ನು ವಿಚಾರಿಸಿಕೊಳ್ಳಲು ಆಗುತ್ತಿಲ್ಲ ಎಂಬ ನೋವು ಒಬ್ಬ ಸೊಸೆಗೆ. ಊರಿನಿಂದ ಬಂದ ತಾಯಿ ಮಗಳಿಗೆ ಸಹಾಯಕರಾಗಿ ನಿಂತರೆ ತಂಗಿಯದು "ಏನಕ್ಕಾ. ನಾವು ಅಪರೂಪಕ್ಕೆ ಬಂದರೆ ಕೆಲಸ ಹೇಳ್ತೀಯ" ಎನ್ನುವ ಸಿಡಿಮಿಡಿ. ಬಿಡುವಿಲ್ಲದೆ ಓಡಾಡುವ ಮಗಳ ಜೊತೆ ಸಮಾಧಾನವಾಗಿ ಕೂತು ನಾಲ್ಕು ಮಾತನಾಡಲು ಆಗುತ್ತಿಲ್ಲವಲ್ಲ ಎನ್ನುವ ಸಂಕಟ ಅಪ್ಪನಿಗೆ ಒಳಗೊಳಗೆ.

ಇದರ ಮಧ್ಯೆ ಪರಿಚಯವೇ ಇಲ್ಲದ ಒಂದಷ್ಟು ಜನರು ಶೌಚಾಲಯಕ್ಕಾಗಿ ಹುಡುಕಿಕೊಂಡು ಬರುವುದು ಇವರ ಮನೆಗೆ. ಯಾರು ಎಂಥವರೆಂಬುದು ಗೊತ್ತಿರುವುದಿಲ್ಲ. ಅಲ್ಲಿ ಇಲ್ಲಿ ಇಟ್ಟ ಮನೆಯ ಕೆಲವಸ್ತುಗಳು ಹೇಗೆ ಕಣ್ಮರೆಯಾಗುತ್ತೆ ಗೊತ್ತೇ ಆಗಲ್ಲ...ಯಾರೀ ಕೆಲಸ ಮಾಡುತ್ತಾರೆ ಎಂದು ಕಣ್ಣಲ್ಲಿ ಕಣ್ಣಿಟ್ಟು ಕಾಯುತ್ತಿರಬೇಕು. ಖಾಲಿ ಚೀಲ ತಂದು ತುಂಬಿಸಿಕೊಂಡು ಹೋಗುತ್ತಾರಂತೆ. ಉಂಡ ಮನೆಯಲ್ಲಿ ಗಳ ಹರಿಯುವ ಜನ ಅಂಥ ಇಂತವರಿಗೆ ಹೇಳೋದು.

ಏನೇ ಆಗಲಿ, ನಮ್ಮ ಮುಂದಿನ ಪೀಳಿಗೆಗೆ ನಾವು ಕೊಡುವ ಉಡುಗೊರೆಗಳಲ್ಲಿ ನಾವು ನೋಡಿದ ಜಾತ್ರೆಗಳ ನೆನಪಷ್ಟೇ ಆಗಿರಬಾರದು. ಮಕ್ಕಳು ಜಾತ್ರೆಯ ಆಚರಣೆಯ ಭಾಗವಾಗಬೇಕು. ಪ್ರತಿ ಮಗುವೂ ನಮ್ಮ ಸಂಸ್ಕೃತಿಯ ರಾಯಭಾರಿಗಳಾಗಬೇಕು. ಈಗಂತೂ ಎಲ್ಲರೂ ವರ್ಷಕ್ಕೆ ಎಷ್ಟೋ ಸಲ ಪ್ರವಾಸದ ಅನುಭವ ಪಡೆದುಕೊಳ್ಳುತ್ತಾರೆ. ವರ್ಷಕ್ಕೆ ಒಮ್ಮೆಯಾದರೂ ಯಾವುದಾದರೂ ಊರಿನ ಜಾತ್ರೆಯ ಆಚರಣೆಯನ್ನು ಪ್ರತ್ಯಕ್ಷವಾಗಿ ಮಕ್ಕಳಿಗೆ ತೋರಿಸಬೇಕು. ಬೆಂಗಳೂರಿನಲ್ಲಿ ಹುಟ್ಟಿ ಬೆಳೆದ ನಾನು ಊರಿಗೆ ಹೋಗುತ್ತಿದ್ದುದು ಬಹಳ ಅಂದ್ರೆ ಬಹಳ ಅಪರೂಪ. ಹಾಗಾಗಿ ನನ್ನ ಅನುಭವಕ್ಕಿಂತ ಗೊತ್ತಿರುವ, ಕೇಳಿರುವ ವಿಷಯಗಳನ್ನು ಲೇಖನದ ರೂಪದಲ್ಲಿ ಪ್ರಸ್ತುತ ಪಡಿಸುವುದೇ ಸೂಕ್ತವೆಂದು ಭಾವಿಸಿ ನನಗೆ ತಿಳಿದ ವಿಚಾರಗಳನ್ನು ಹಂಚಿಕೊಂಡಿದ್ದೇನೆ. ಧನ್ಯವಾದಗಳು.

-o-



# ಧನ್ಯವಾದಗಳು

-ಅನುಪಮ ಜೋಷಿ

ಮನುಷ್ಯನ ಜೀವನದಲ್ಲಿ ಧನ್ಯವಾದ ಅಂತ ಹೇಳುವ ನಾಲ್ಕು ಪದ ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ನಿಜ ಹೇಳಬೇಕೆಂದರೆ ಅದು ಜೀವನದ ಅವಿಭಾಜ್ಯ ಅಂಗ ಕೂಡ ಹೌದು. ಈ ಪಟ್ಟಿಯಲ್ಲಿ ಮೊದಲ ಬರುವವರು ನಮ್ಮನ್ನು ಅಕ್ಕರೆಯಿಂದ ಹೆತ್ತು ಹೊತ್ತು ಸಾಕಿ ಸಲಹಿದ ತಾಯಿ ತಂದೆಯರೇ. ಅವರಿಗೇ ನಮ್ಮ ಮೊದಲ ಧನ್ಯವಾದಗಳನ್ನು ಸಲ್ಲಿಸಲೇಬೇಕು.

ನಮ್ಮ ಬದುಕಿಗೆ ಮೂಲ ನೆಲೆಯಾದ ಪಂಚಭೂತಗಳು ನೆಲ, ಜಲ, ಅನಿಲ, ಅನಲ, ಪ್ರಕೃತಿ ನಮಗೆ ಕೊಡುವ ಎಲ್ಲಾ ಸವಲತ್ತುಗಳಿಗೂ ನಮ್ಮ ಹೃತ್ಪೂರ್ವಕ ಧನ್ಯವಾದ. ಅದೂ ಪರಿಸರವನ್ನು ಸಂರಕ್ಷಿಸುವ ಮೂಲಕ, ನಮ್ಮ ಮುಂದಿನ ಪೀಳಿಗೆಗೆ ಅದನ್ನು ಉಳಿಸಿ ಬೆಳೆಸುವ ಮೂಲಕ ತೋರಿಸಬೇಕು. ಪರಿಸರದ ಎಲ್ಲಾ ಸಂಪನ್ಮೂಲಗಳನ್ನು ಸೂಕ್ಷ್ಮವಾಗಿ, ಹಿತವಾಗಿ ಮಿತವಾಗಿ ಸಂವೇದನಾ ಶೀಲರಾಗಿ ಬಳಸಬೇಕು. ಅದಕ್ಕೆ ಬದಲಾಗಿ ಸಂವೇದನಾ ಹಿತರಾಗಿ ಮುಂದಾಲೋಚನೆ ಇಲ್ಲದೆ ವ್ಯರ್ಥ ಮಾಡಿದರೆ ನಾವು ಕೃತಘ್ನರಾದಂತೆಯೇ. ಅದಕ್ಕೆ ತೆರಬೇಕಾದ ಬೆಲೆಯು ಬಲು ದೊಡ್ಡದು.

ನಮ್ಮ ಪರಂಪರೆ ಕೇವಲ ದೇಹಕ್ಕೆ ಅಷ್ಟೇ ಸೀಮಿತವಲ್ಲ. ಶ್ರೀಮಂತ ಬೌದ್ಧಿಕ, ಸಾಂಸ್ಕೃತಿಕ ಪರಂಪರೆಯನ್ನೂ ಹೊಂದಿದ್ದೇವೆ. ವೈರಾಗ್ಯದ ಶಕ್ತಿ ಮತ್ತು ಅದರ ಸೊಗಸು ಸಾರಿದ ನಮ್ಮ ಸಾಧು ಸಂತರು, ಹಿರಿಯರು, ಮಹರ್ಷಿಗಳಿಗೂ ಸಹ ಧನ್ಯವಾದ ಸಲ್ಲಿಸಬೇಕು. ನಮ್ಮ ಪಂಚ ಮಹಾಯಜ್ಞಗಳೂ ಅಂದರೆ ಪಿತೃಯಜ್ಞ, ದೇವ, ಋಷಿ, ಯಜ್ಞ ಮತ್ತು ಪಂಚ ಭೂತಗಳಿಗಾಗಿ ಭೂತ ಯಜ್ಞಗಳು ನಾವು ಕೃತಜ್ಞತೆ ಸಲ್ಲಿಸುವ ಪರಿಯೇ. ಮಾನವನಿಗೆ ಯಜ್ಞಗಳು ಹೇಗೆ ಅನಿವಾರ್ಯ ಎಂಬುದನ್ನು ಭಗವದ್ಗೀತೆ ವಿವರಿಸುತ್ತದೆ.

ಭೂಮಿಯ ಮೇಲಿರುವ ಪ್ರತಿ ಜೀವಿಗೂ ಅದರದ್ದೇ ಆದ ಸ್ಥಾನ ಮಾನಗಳಿವೆ. ಅದರ ಒಟ್ಟಾರೆ ಅಸ್ತಿತ್ವಕ್ಕೆ ತನ್ನದೇ ಆದ ಅರ್ಥವಿದೆ. ಹೊತ್ತಿ ಉರಿಯುವ ಅಗ್ನಿಕುಂಡಕ್ಕೆ ಸಮಿತ್ತುಗಳನ್ನು ಹಾಕಿದರಷ್ಟೆ ಯಜ್ಞ ಎಂದುಕೊಳ್ಳುವುದು ತಪ್ಪು. ಯಜ್ಞವೆಂಬದು ಧನ್ಯವಾದದ ಸಲ್ಲಿಕೆಯ ಒಂದು ರೂಪವಷ್ಟೆ. ಸ್ವಾರ್ಥ ತೊರೆಯುವ ಮತ್ತು ತನ್ನದೆಂಬ ಹಮ್ಮು ಬಿಡುವ ಪ್ರಕ್ರಿಯೆ ಇದು. ಇಲ್ಲ ಸಂತೃಪ್ತಿಯೇ ಧನ್ಯತೆಯ ಸಲ್ಲಿಸುವ ಪ್ರತಿರೂಪ. ದುರಾಸೆ, ವೈರತ್ವ, ಪ್ರತಿಸ್ಪರ್ಧೆ ಎಲ್ಲವೂ ಕೆಟ್ಟ ಹಾದಿ ತುಳಿಯಲು ಪ್ರೇರೇಪಿಸುತ್ತವೆ. ಖಾಸಗಿ ಮತ್ತು ಸಾರ್ವಜನಿಕ ಬದುಕಿನಲ್ಲಿ ಭ್ರಷ್ಟಾಚಾರ ಮತ್ತು ತಮ್ಮವರಿಗೆ ಉಪಕರಿಸುವ ಮನಸ್ಥಿತಿಯನ್ನು ಹುಟ್ಟುಹಾಕುತ್ತವೆ. ಇವುಗಳನ್ನೆಲ್ಲಾ ಸುಟ್ಟು ಹಾಕುವುದೇ ನಿಜ ಯಜ್ಞ.

ತ್ಯಾಗದ ಪ್ರತೀಕ ಈ ಯಜ್ಞ. ಯಾವುದೇ ವಸ್ತುವಿನ ಬಗ್ಗೆ ವ್ಯಾಮೋಹ ಇಟ್ಟುಕೊಳ್ಳದೇ, ಕಮಲ ಪತ್ರದ ಮೇಲಿನ ನೀರ ಹನಿಯಂತೆ ಅಂಟಿಕೊಳ್ಳದೇ ಬದುಕುವುದು ಅತ್ಯಂತ ಸಫಲ ಯಜ್ಞ. ಬದುಕು ಒಂದು ಮುಕ್ತ ಮತ್ತು ಸಹಜತೆ ಅತ್ತ ಸಾಗಬೇಕು. ಸಹಜವಾಗಿ ಬದುಕು ಸಾಗಿಸುವ ಸಮಾಜ ಅಥವಾ ವ್ಯಕ್ತಿಗೆ ವಿಶ್ವಾಸಾರ್ಹತೆ ತಾನೇತಾನಾಗಿ ಒದಗುತ್ತದೆ. ಕೃತಘ್ನರಾದಾಗ ಪತನ ಆರಂಭವಾಗುತ್ತದೆ. ಹಾಗಾಗಿಯೇ ಮಾನವನ ಬದುಕಿನಲ್ಲಿ ಕೃತಜ್ಞತೆಗೆ ಅಥವಾ ಧನ್ಯವಾದ ಕ್ಕೆ ಮಹತ್ವದ ಪ್ರಾಮಾಣಿಕತೆಯ ಸ್ಥಾನ ಇದೆ. ಅದು ನಿಮ್ಮ ಬದುಕಿನಲ್ಲಿ ನಿಮಗೇ ಗೊತ್ತಿಲ್ಲದೆ ಅದ್ಭುತವೆನ್ನಿಸುವ ಬದಲಾವಣೆಯನ್ನು ತರುತ್ತದೆ. ನನ್ನದೆನ್ನುವುದನ್ನು ತೊಡೆದು ನಮ್ಮದೆನ್ನುವ ಸಮಷ್ಟಿ ಭಾವವನ್ನು ಹುಟ್ಟುಹಾಕುತ್ತದೆ. ಈ ಮೂಲಕ ನಿಸ್ವಾರ್ಥದ, ತ್ಯಾಗದ ಪಾಠ ಕಲಿಸುತ್ತದೆ. ಪ್ರತಿಯೊಂದನ್ನೂ ಅದು ವೈಯಕ್ತಿಕವೇ ಇರಲಿ ಇಲ್ಲಾ ಸಾಮುದಾಯಿಕವೇ ಆಗಲಿ ಅಥವಾ ಇನ್ನೂ ವಿಸ್ತೃತವಾದ ಪ್ರಕೃತಿ, ವಿಶ್ವದ ಅಗತ್ಯಗಳನ್ನು ಕಾಳಜಿಯಿಂದ ಕಾಣುವ ಮನೋಭಾವ ಬೆಳೆಸುತ್ತದೆ. ಹಾಗಾಗಿಯೇ ಪ್ರಕೃತಿ ನೀಡಿರುವ ಅಣು-ತೃಣಕಾಷ್ಠಗಳಿಗೂ ಧನ್ಯವಾದ ಸಲ್ಲಿಸುವ ಕೆಲಸವಾಗಲಿ. ಕಾಳಜಿ ಬೆಳೆಯಲಿ ಬದುಕು ಚಿರಂತನವಾಗಲಿ

-o-



# ಕೌನ್ಸಲಿಂಗ್ ಏನು? ಅದರ ಪ್ರಯೋಜನ ಏನು?

-ಚಂಪಾ ಚಿನಿವಾರ್
ಆಪ್ತ ಸಮಾಲೋಚಕರು

ಕೌನ್ಸಲಿಂಗ್ ಅಂದರೆ ಆಪ್ತ ಸಲಹೆ/ಸಮಾಲೋಚನೆ. ಕೌನ್ಸಲರ್ ಎಂದರೆ ಈ ಆಪ್ತ ಸಲಹೆಯನ್ನು ನೀಡುವವರು, ಸಮಾಲೋಚಕರು. ಕೌನ್ಸಲಿಂಗ್ ಸೆಂಟರ್ ಗಳಿದೆ ಅಲ್ಲಿ ಯಾರೇ ಸಮಸ್ಯೆ ಇರುವವರು ಬಂದರೆ ಅವರಿಗೆ ಸಮಸ್ಯೆ ಬಗೆಹರಿಸಿಕೊಳ್ಳಲು ಮಾರ್ಗದರ್ಶನ ನೀಡುತ್ತಾರೆ.



ಒಬ್ಬೊಬ್ಬರದು ಒಂದೊಂದು ಥರದ ಸಮಸ್ಯೆಗಳಿರುತ್ತದೆ. ಅವರು ಕೌನ್ಸಲರ್ಸ್ ಗೆ ಅವರ ಸಮಸ್ಯೆಗಳ ಬಗ್ಗೆ ಸಂಪೂರ್ಣ ಮಾಹಿತಿ ಕೊಟ್ಟರೆ ಮಾತ್ರ ಅವರು ಪರಿಹರಿಸಬಹುದು. ಇಲ್ಲವಾದರೆ ಆ ಸಮಸ್ಯೆ ಉಲ್ಬಣಗೊಂಡು ಬಹಳ ತೊಂದರೆ ಅನುಭವಿಸಬೇಕಾಗುತ್ತದೆ. ಮನೆಯವರಿಂದ ತಿರಸ್ಕಾರ ಪಡೆಯಬಹುದಾದ ಎಷ್ಟೋ ಸಂದರ್ಭಗಳು ಉಂಟು.

ಸಮಸ್ಯೆಗಳೆಂದರೆ ಯಾವಾಗಲೂ ದೊಡ್ಡ ಅಡೆತಡೆಗಳೇ ಆಗಬೇಕಿಲ್ಲ, ಇಂದು ಸಣ್ಣ ಸಮಸ್ಯೆ ಅಂದುಕೊಂಡಿದ್ದು ನಾಳೆ ದೊಡ್ಡ ಸಮಸ್ಯೆಯಾಗಬಹುದು. ಕೆಲವರು ಕೌನ್ಸಲರ್ ಭೇಟಿ ಮಾಡಿ ಸಮಸ್ಯೆ ನಿವಾರಣೆ ಮಾಡಿಕೊಳ್ಳಬಹುದು ಎಂದು ಹೇಳಿದಾಗ ನನಗೇನು ಹುಚ್ಚಾ ಅವರ ಬಳಿ ಹೋಗಲು ಎಂಬ ಮಾತನ್ನು ಬಹಳ ಜನರ ಬಳಿ ಕೇಳಿರಬಹುದು. ಇದು ತುಂಬಾ ತಪ್ಪು ಗ್ರಹಿಕೆ. ಎಲ್ಲರೂ ತಿಳಿದುಕೊಳ್ಳಬೇಕಾದ ವಿಷಯವಿದು.

ಕೌನ್ಸಲರ್ ನ್ನು ಹೇಗೆ ಸಂಪರ್ಕಿಸುವುದು?

ಕೌನ್ಸಲಿಂಗ್ ಸಂಬಂಧಪಟ್ಟಂತ ಕೌನ್ಸಲಿಂಗ್ ಸೆಂಟರ್ ಗಳು ಇದೆ ಅಲ್ಲಿ ಸಂಪರ್ಕಿಸಿ ತಮ್ಮ ಸಮಸ್ಯೆಗಳನ್ನು ನಿವಾರಣೆ ಮಾಡಿಕೊಳ್ಳಬಹುದು. ಅಲ್ಲಿ ಮೊದಲ ಭೇಟಿಯಲ್ಲಿಯೇ ಸಮಸ್ಯೆ ನಿವಾರಣೆಯಾಗುತ್ತದೆ ಎಂದು ಹೇಳಲಾಗದು. ಏಕೆಂದರೆ ಬಂದಂತಹ ಜನರು ಅವರ ಸಮಸ್ಯೆಗಳನ್ನು ಹೇಳಿಕೊಳ್ಳಲು ಮೊದಲಿಗೆ ಕೌನ್ಸಲರ್ಸ್ ಮೇಲೆ ನಂಬಿಕೆ ಬರಬೇಕು. ಅವರು ಹಂಚಿಕೊಳ್ಳುವ ವಿಚಾರ ಅವರ ಹೊರತಾಗಿ ಬೇರೆಯವರಿಗೆ ಅಥವಾ ಅವರ ಪರಿವಾರದವರಿಗೆ ತಿಳಿಯಬಾರದು ಎಂಬ ಮನಸಿರುತ್ತದೆ. ಅದನ್ನು ಕೌನ್ಸಲರ್ಸ್ ಅವರಿಗೆ ಆತ್ಮವಿಶ್ವಾಸ ಮೂಡಿಸಬೇಕು.

ಇಬ್ಬರ ನಡುವಿನ ಮಾತುಕತೆ ಬೇರೆ ಯಾರ ಬಳಿಯೂ ನಾವು ಹೇಳುವುದಿಲ್ಲ, ಕೆಲವೊಮ್ಮೆ ಹೇಳುವ ಸಂದರ್ಭ ಬಂದರೂ ಕೆಲವು ವಿಷಯಗಳನ್ನು ಮಾತ್ರ ತಿಳಿಸುತ್ತೇವೆ ಎಂದು ಅವರಿಗೆ ಭರವಸೆ ನೀಡಿದರೆ ಅವರಿಗೆ ನಂಬಿಕೆ ಬರುತ್ತದೆ.

ಒಂದೇ ಭೇಟಿಯಲ್ಲಿ ಸಮಸ್ಯೆ ಬಗೆಹರಿಯುದಿಲ್ಲ, ಮೂರ್ನಾಲ್ಕು ಅಥವಾ ಐದಾರೂ ಭೇಟಿಯವರೆಗೂ ನಡೆಯಬಹುದು. ಇಲ್ಲಿ ಸಂಯಮ, ಸಮಯ ಬಹಳ ಮುಖ್ಯ.

ಯಾರಿಗೆ ಕೌನ್ಸಲಿಂಗ್ ಮಾಡಬೇಕು?

ಮನುಷ್ಯ ವಿಭಿನ್ನ ಒಬ್ಬರಂತೆ ಮತ್ತೊಬ್ಬರು ಇರಲು ಸಾಧ್ಯವಿಲ್ಲ. ಕೆಲವೊಮ್ಮೆ ಅವನಿಗೆ ದೊಡ್ಡ ಮಟ್ಟದಲ್ಲಿ ನಿರ್ಧಾರ ತೆಗೆದುಕೊಳ್ಳಲು ಅಶಕ್ತನಾದಾಗ ಕನ್ಸಲರ್ಸ್ಗಳನ್ನು ಸಂಪರ್ಕಿಸಬಹುದು.

ಸದಾ ನಕಾರಾತ್ಮಕ ಚಿಂತನೆಗಳು, ಭಯ, ಭ್ರಮೆಯೇ ಸತ್ಯ ಎಂದು ನಂಬಿಕೊಂಡಾಗ, ಕೀಳರಿಮೆ, ಓದುವುರಲ್ಲಿ ಹಿಂದೆ, ಅಂತರ್ಮುಖಿಯಾದಾಗ, ಲೈಂಗಿಕ ಸಮಸ್ಯೆ, ವಿವಾಹ ಸಂಬಂಧಗಳ ಸಮಸ್ಯೆ, ಖಿನ್ನತೆ ಮುಂತಾದವುಗಳನ್ನು ಎದುರಿಸುತ್ತಿರುವವರಿಗೆ ಕೌನ್ಸಲಿಂಗ್ ಬಹಳ ಅವಶ್ಯಕತೆ ಇದೆ.

ಕೌನ್ಸಲಿಂಗ್ ತೆಗೆದುಕೊಳ್ಳುವುದರಿಂದ ಯಾವುದೇ ರೀತಿಯ ಹಾನಿ ಇಲ್ಲ, ಬದಲಾಗಿ ಬಹಳ ದೃಢವಾಗಿ, ನಿರ್ಭಯವಾಗಿ ಜೀವನ ನಡೆಸುವಂತೆ ಮಾರ್ಗದರ್ಶನ ತೆಗುದುಕೊಳ್ಳಬಹುದಾಗಿದೆ.

ಮನುಷ್ಯ ಹುಟ್ಟಿದಾಗಿನಿಂದ ಸಾಯುವವರೆಗೂ ಹೇಗೆ ಇರುತ್ತಾನೆ ಅವನ ಸುತ್ತಮುತ್ತ ಪರಿಸರ ಅವನ ಮೇಲೆ ಹೇಗೆ ಪರಿಣಾಮ ಬೀರುತ್ತದೆ ಎಂದು ಮುಂದಿನ ಅಂಕಣಗಳಲ್ಲಿ ತಿಳಿದುಕೊಳ್ಳೋಣ.

-o-



# ಪುಸ್ತಕ ವಿಮರ್ಶೆ

-ಶಶಿ ಶಂಕರ್

ಜನಪ್ರಿಯ ಕಾದಂಬರಿಗಾರ್ತಿ ಎಂಕೆ ಇಂದಿರಾವರ ಸದಾನಂದ ಕಾದಂಬರಿಯ ಬಗ್ಗೆ.




ಎಂಕೆ ಇಂದಿರಾರವರ ರಾಜ್ಯ ಸಾಹಿತ್ಯ ಅಕಾಡೆಮಿ ಪುರಸ್ಕೃತ ಜನಪ್ರಿಯ ಕಾದಂಬರಿ "ಸದಾನಂದ".

ಕಮಲ, ಮೂರ್ತಿ ಮತ್ತು ರಾಜು ರಾಮಯ್ಯ ಮತ್ತು ಅಚ್ಚಮ್ಮನವರ ಮಕ್ಕಳು. ಮನೆಯಲ್ಲಿ ವಿಧವೆ ಅಕ್ಕ ಯಂಟಮ್ಮನವರದ್ದೇ ಅಡುಗೆ ಮನೆ ಪಾರುಪತ್ಯ ಎಲ್ಲಾ. ಇನ್ನೊಬ್ಬ ತಂಗಿ ಪುಟ್ಟಮ್ಮ ಅನತಿ ದೂರದಲ್ಲಿರುವ ದುಂಡುಮಲ್ಲಿಗೆ ಹಳ್ಳಿಯಲ್ಲಿರುತ್ತಾರೆ. ಅವರ ಗಂಡ ಊರಿನ ಶ್ಯಾನುಭೋಗರಾದ ತಮ್ಮಯ್ಯ ಅವರಿಗೆ ನಾಲ್ಕು ಮಕ್ಕಳು ಅಮ್ಮಯ್ಯ, ಗೌರಿ, ಶೀನು ಮತ್ತು ಸಾಚಿ. ಕಾಫಿ ಪ್ಲಾಂಟರ್ ರಾಮಯ್ಯನದು ಚಂದದ ಸಂಸಾರ. ಇದರಲ್ಲಿ ಮೊದಲ ಪೆಟ್ಟು ಬಿದ್ದದ್ದೆ ಮಗಳ ಬಾಳಲ್ಲಿ. ಮಗಳು ಕಮಲಳನ್ನು ಅಚ್ಚಮ್ಮನ ತಮ್ಮನಿಗೆ ಕೊಟ್ಟು ಮದುವೆ ಮಾಡಿರುತ್ತಾರೆ ಆದರೆ ದುರ್ವಿಧಿ ಹಾವಿನ ರೂಪದಲ್ಲಿ ಬಂದು ನಾಗಭೂಷಣನ ಕಚ್ಚಿ ಸಾಯಿಸುತ್ತದೆ. ಇನ್ನೂ ನಿಷೇಕವೇ ಆಗದೆ.. ಹದಿನೈದು ವಯಸ್ಸಿನಲ್ಲೇ ವಿಧವೆಯಾದವಳು ಕಮಲೆ. ಮೂರ್ತಿ ಕಲಿಯುವುದರಲ್ಲಿ ತುಂಬಾ ಹುಷಾರು.. ರಾಜುಗೆ ಕಲಿಯುವುದಕ್ಕಿಂತ ಎಸ್ಟೇಟ್ ಹಾಗೂ ಇತರ ಕೆಲಸಗಳಲ್ಲೇ ಆಸಕ್ತಿ. ಪುಟ್ಟಮ್ಮನ ಎರಡನೇ ಮಗಳು ಗೌರಿಯನ್ನು ಮೂರ್ತಿಗೆ ವಿವಾಹ ಮಾಡಿ ಕೊಡುವುದೆಂದು ಮೊದಲೇ

ಮಾತಾಗಿರುತ್ತೆ. ಮೂರ್ತಿಗೋ ಒಡ್ಡೋಡ್ಡಾಗಿರುವ ಗೌರಿಯನ್ನು ಕಂಡರೆ ಅಸಹನೆ. ಅವಳು ಓದಿನ ಕಡೆಗೆ ಗಮನ ಕೊಡಬೇಕೆಂದು ಅವನ ಆಸೆ. . ಗೌರಿಗೋ ಹೊಳೆಯಲ್ಲಿ ಈಜುವುದು, ಮರ ಹತ್ತಿ ಪೇರಲೆ ಪನ್ನೇರಲೆ ಕೊಯ್ದು ತಿನ್ನುವುದು ಇದರಲ್ಲೇ ಒಲವು. ಮೂರ್ತಿಗಿಂತ ತನ್ನ ಓರಗೆಯವನಾದ ರಾಜುವಿನಲ್ಲೇ ಸಲಿಗೆ ಮಾತುಕಥೆ ಎಲ್ಲಾ.

ಎರಡು ಮನೆಗಳಿಗೆ ಮಕ್ಕಳ ಓಡಾಟ ಪ್ರತಿವಾರ ಇದ್ದ ಹಾಗೇ ಇರುತ್ತೆ. ಮೂರ್ತಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರೂ ಸೇರುತ್ತಾನೆ. ಹಾಗೇ ಗೌರಿ, ಶೀನು ತಮ್ಮ ಸೋದರ ಮಾವನ ಮನೆಗೆ ಚಿಕ್ಕಮಗಳೂರಿಗೆ. ನೆರೆಮನೆಯ ಶಾಮಣ್ಣನವರ ಮಗಳು ಜಾನಕಿ ಗೌರಿಯ ಜಿಗ್ರಿ ದೋಸ್ತ್. ಶಾಮಣ್ಣ ನವರಿಗೆ ಜಾನಕಿಯನ್ನು ರಾಜುವಿಗೆ ಮದುವೆ ಮಾಡಿಕೊಡಬೇಕೆಂದು ಇಚ್ಛೆ. ಇಂಟರ್ ಗಾಗಿ ರಾಜು ಶೀನು ಶಿವಮೊಗ್ಗ ಸೇರುತ್ತಾರೆ. ಮೂರ್ತಿ ಬಿಎಸ್ಸ್ ಸಿ ಮುಗಿಸಿ ಎಮ್ಎಸ್ ಸಿ ಮಾಡುತ್ತಿರುತ್ತಾನೆ.

ಇತ್ತ ಗೌರಿ ಹತ್ತನೇ ತರಗತಿ ಪರೀಕ್ಷೆಯಲ್ಲಿ ಹಾಗೂ ಶೀನು ಮತ್ತು ರಾಜು ಇಂಟರ್ ಪರೀಕ್ಷೆಯಲ್ಲಿ ನಪಾಸ್. ರಾಜುವಿನದು ಅಪ್ಪನ ಹಾಗೇ ಆತ್ಮೀಯ ಹೃದಯ. ಅಕ್ಕನ ಪರಿಸ್ಥಿತಿಯ ಅರಿವು ಆ ಪುಟ್ಟ ಹುಡುಗನಿಗಾಗದಿದ್ದರೂ ಅಕ್ಕ ದುಃಖದಲ್ಲಿದ್ದಾಳೆ ಎಂಬ ಅರಿವಿತ್ತು. ಅಚ್ಚಮ್ಮನವರು ಮಗಳ ಪರಿಸ್ಥಿತಿ ಹಾಗಾದ ಮೇಲೇ ತಮ್ಮನ್ನು ತಾವು ಹೆಚ್ಚಿನ ಸಮಯ ದೇವರಕೋಣೆಯಲ್ಲಿ ಕಳೆಯುತ್ತಿದ್ದರೆ ರಾಮಣ್ಣ ನವರು ಊರಿಗೆ ಸಹಾಯ ಮಾಡುವುದರಲ್ಲಿ.

ಇತ್ತ ಕಮಲಳ ಯೌವನಿಕೆಯ ಮನಸಿನಲ್ಲೂ ಆಸೆಗಳು ಚಿಗುರುತ್ತಿರುತ್ತವೆ ಅವಳು ಓದುವ ಕಾದಂಬರಿಗಳು ಇದಕ್ಕೆ ಪೂರಕವಾಗಿ ಅವಳಲ್ಲಿ ತನ್ನ ಪರಿಸ್ಥಿತಿಯ ಬಗ್ಗೆ ಮನದಲ್ಲೇ ಯಾತನೆ ಪಡುತ್ತಿರುತ್ತಾಳೆ. ಅವಳಿಗಿರುವ ಸಮಾಧಾನವೆಂದರೆ ತನ್ನ ಅಂತರಂಗದ ಗೆಳತಿ ಗೌರಿಯೇ ತಮ್ಮನ ಹೆಂಡತಿಯಾಗಿ ಬರುವುದು..

ಲೇಖಕಿ ಕಮಲಳ ತಳಮಳ ಮತ್ತು ಗೌರಿಯ ಹುಡುಗಾಟ.. ರಾಜುವಿನ ಮುಗ್ಧ ಮನಸ್ಸು.. ಮಕ್ಕಳ ಆಟ ಮಾತುಕಥೆ ಮಲೆನಾಡಿನ ಸೌಂದರ್ಯ ಮತ್ತು ತಿನಿಸುಗಳ ಬಗ್ಗೆ ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ. ಇಷ್ಟರಲ್ಲೇ ಮೂರ್ತಿಗೆ ಕಾಫಿ ಬೋರ್ಡನ ಅಧ್ಯಕ್ಷ ದೇಶ್ಮುಖರ ಮಗಳಾದ ತನ್ನ ಸಹಪಾಠಿ

ಮುಕ್ತಳ ಪರಿಚಯವಾಗುತ್ತೆ. ಪರಿಚಯ ಪ್ರೇಮಕ್ಕೆ ತಿರುಗಿತಾನು ಮುಕ್ತಳನ್ನೇ ಮದುವೆಯಾಗುವುದೆಂದು ನಿಶ್ಚಯಿಸಿಬಿಡುತ್ತಾನೆ.

ಇತ್ತ ರಾಮಣ್ಣ ಮತ್ತು ತಮ್ಮಯ್ಯ ಶಾಸ್ತ್ರಿಗಳಿಂದ ಮದುವೆ ದಿನ ನಿಶ್ಚಯ ಮಾಡಲೆಂದು ಹೋದಾಗ ಮೂರು ತಿಂಗಳು ಬಿಟ್ಟು ಮಾತಾಡೋಣಾ ಎಂದು ಖಡಾಖಂಡಿತವಾಗಿ ಶಾಸ್ತ್ರಿಗಳು ಹೇಳಿಬಿಡುತ್ತಾರೆ. ಹೇಗೋ ಅಣ್ಣಾನ ಮನೆಗೆ ತಾನೆ ಹೋಗುವುದು ಗೌರಿ ಎಂದು ಪುಟ್ಟಮ್ಮನವರಿಗೂ ನಿರಾಳ.

ಇದರ ಮಧ್ಯೆ ಕಮಲೆ ಕೂಡ ಅಪರೂಪಕ್ಕೆ ಅತ್ತೆಮನೆಗೆ ಹೋಗಿ ಒಂದೆರಡು ದಿನ ಇದ್ದು ಬರುತ್ತಾಳೆ. ಪ್ರಕೃತಿಯ ಸೌಂದರ್ಯ ಮತ್ತು ಅನಾಥ ಹುಡುಗ ಬಚ್ಚಾನ ಪಾತ್ರವೂ ತುಂಬಾ ಚೆನ್ನಾಗಿ ಚಿತ್ರಿತವಾಗಿದೆ.

ಆದರೆ ಇತ್ತ ರಾಮಣ್ಣನವರನ್ನು ದೇಶ್ಮುಖರವರು ಕರೆಸಿ ಮಗಳ ಮದುವೆ ಪ್ರಸ್ತಾಪವನ್ನಿಟ್ಟಾಗ ಮಗ ತನಗೆ ಮೊದಲೇ ಮದುವೆ ಗೊತ್ತಾಗಿರುವುದರ ಬಗ್ಗೆ ಅವರಿಗೆಲ್ಲಾ ಏನೂ ಹೇಳದೆ ಕತ್ತಲೆಯಲ್ಲಿಟ್ಟಿರುವುದರ ಅರಿವಾಗಿ ದಿಗ್ಭ್ರಮೆಗೊಳ್ಳುತ್ತಾರೆ. ಮನೆಯಲ್ಲಿ ಈ ವಿಷಯ ತಿಳಿದಾಗ ಮನೆಯವರ ಅಳಲು ತುಂಬಾ ಸಹಜವಾಗಿ ಚಿತ್ರಿತವಾಗಿದೆ. ಯಾವಾಗಲೂ ಅತ್ತೆಮನೆಗೆ ಹೋಗುತ್ತಿದ್ದ ರಾಜು ಈಗ ವಿಷಯ ತಿಳಿದು ಗೌರಿಯ ಎದುರಿಸಲಾರದೆ ಆ ಕಡೆ ಹದಿನೈದು ದಿವಸದವರೆಗೂ ತಲೆ ಹಾಕುವುದಿಲ್ಲಾ. ಮತ್ತೆ ಪುಟ್ಟಮ್ಮನವರಿಗೆ ರಾಮಣ್ಣನವರೇ ಬಂದು ವಿಷಯ ತಿಳಿಸಿದಾಗ ಪುಟ್ಟಮ್ಮನ ಹೆತ್ತೊಡಲು ಹೋ ಎಂದು ಅತ್ತರೆ ನಿರ್ಲಿಪ್ತ ಮೌನ ತಮ್ಮಣ್ಣನವರದು. ಆದರೆ ಗೌರಿ... ಇಲ್ಲಿ ಗೌರಿಯ ಗಟ್ಟಿ ವ್ಯಕ್ತಿತ್ವದ ಅರಿವಾಗುತ್ತದೆ. ಆಕೆ ತಾನೇ ಅಮ್ಮನನ್ನು ಸಮಾಧಾನಿಸುತ್ತಾಳೆ ಬೈಸಿಕೊಳ್ಳುತ್ತಾಳೆ...

ಕಮಲಳು ಒತ್ತಾಯ ಮಾಡಿ ಮೂರ್ತಿಯನ್ನು ಪುಟ್ಟತ್ತೆಯ ಮನೆಗೆ ಮದುವೆಯ ಹೇಳಿಕೆಗೆ ಕಳಿಸುತ್ತಾಳೆ.. ಮತ್ತೆ ಎರಡು ಮನೆಯ ಓಡಾಟ ಶುರುವಾಗುತ್ತೆ ಮೂರ್ತಿಯ ಮದುವೆಗೂ ಎಲ್ಲಾ ತೆರಳುತ್ತಾರೆ.. ಮುಕ್ತಾಳ ನಿರ್ಭಿಡೆ ನಡೆ ಸೋಜಿಗ ಹುಟ್ಟಿಸುತ್ತದೆ.

ಆದರೆ ನಾವೆಲ್ಲ ತಿಳಿದುಕೊಂಡಹಾಗೇ ದೇಶ್ಮುಖ ಕುಟುಂಬ ಶ್ರೀಮಂತರಾದರೂ ಹಣದ ಸೊಕ್ಕಿರುವುದಿಲ್ಲಾ.. ಶಾಮಣ್ಣನವರಿಂದ ಗೌರಿ ಮೂರ್ತಿಗೆ ಗೊತ್ತಾಗಿದ್ದ ವಧು ಎಂದು ತಿಳಿದಾಗ ಮನೆಯವರೆಲ್ಲರೂ ಮರಗುತ್ತಾರೆ. ತಮಗೆ ಅರಿವಿಲ್ಲದೆ ಒಂದು ಹೆಣ್ಣು ಮಗಳ ಬಾಳು ಹೊಸಕಿದೆವಲ್ಲಾ ಎಂದು. ಮುಕ್ತಳೂ ಕೂಡ ಗಂಡನಿಗೆ ನೇರವಾಗಿಯೇ ಪ್ರಶ್ನಿಸುತ್ತಾಳೆ.. ಯಾಕೆ ಹೀಗೆ ಮಾಡಿದೆ ಎಂದು ಆದರೆ ಮೂರ್ತಿಯ ಹತ್ತಿರ ಉತ್ತರವಿರುವುದಿಲ್ಲಾ. ರಾಮಣ್ಣನಿಗೆ ತಾವು ತಂಗಿಗೆ ಮಾತು ಕೊಟ್ಟು ತಪ್ಪಿದೆನಲ್ಲಾ ಎಂಬ ಕೊರಗು. ಶಾಸ್ತ್ರಿಗಳು ಗೌರಿಗೆ ಕಂಟಕವೊಂದಿದೆ ಅದಾದ ಮೇಲೇ ಸೋದರಿಕೆಯಲ್ಲೇ ಮದುವೆ ಎಂದಿದ್ದರೂ ರಾಮಣ್ಣ ಸಂಬಂಧ ಹುಡುಕ ತೊಡಗುತ್ತಾರೆ. ಲಗ್ನ ನಿಶ್ಚರ್ಯಯಾಗಿ ಗೌರಿ ಮನೆಯವರು ಬಸ್ಸಿನಲ್ಲಿ ತಮ್ಮ ಊರು ದುಂಡುಮಲ್ಲಿಗೆಗೆ ತೆರಳುವಾಗ ಅಪಘಾತದಲ್ಲಿ ಗೌರಿ ಕಾಲು ಕಳೆದುಕೊಳ್ಳಬೇಕಾಗುತ್ತದೆ.

ಇತ್ತ ಕಮಲಳದೂ ಅಯೋಮಯ ಮನಸ್ಥಿತಿ. ಗೌರಿ ಬಂದರೆ ತಾನು ಹಾಯಾಗಿ ಇರಬಹುದೆಂದು ಎಣಿಸಿದ್ದಳವಳು ಈಗ ಮುಂದೇನು ಎಂಬ ಚಿಂತೆ. ಜಾನಕಿ ರಾಜುವಿನ ಹೆಂಡತಿ ಎಂದು ಗಟ್ಟಿ ಮಾಡಿರುತ್ತಾರೆ ಶಾಮಣ್ಣನವರು. ಇತ್ತ ಕಮಲ, ಗೌರಿ, ಜಾನಕಿಗೆ ಕಾದಂಬರಿ ತಲುಪಿಸುವ ಕೆಲಸ ರಾಜು ಮತ್ತು ಶೀನುವಿನದು. ಕಾದಂಬರಿ ಅದೂ ರಮಾನಂದರ ಕಾದಂಬರಿಗಳ ಓದಿ ಕಮಲ ಪ್ರಭಾವಿತಳಾಗುತ್ತಿರುತ್ತಾಳೆ. ಅಕ್ಕ,ಂ ತಮ್ಮ ಮತ್ತು ಜಾನಕಿಯ ನಡುವೆ ಇದರ ಬಗ್ಗೆ ಚರ್ಚೆ ಕೂಡ ನಡೆಯುತ್ತಿರುತ್ತದೆ.

ಮೊದಲ ಅರ್ಧದಲ್ಲಿ ಗೌರಿ ರಾಜು ಕಮಲ ಮೂರ್ತಿಯ ಸುತ್ತಲೇ ಸುತ್ತುವ ಕಥೆಗೆ ಸದಾನಂದನೆಂಬ ಹೆಸರು ಏಕಿಟ್ಟರು ಎಂದೇ ಕಾಡುತ್ತಿರುವಾಗ... ಈ ಕಥೆಯ ಹೀರೋ ಸದಾನಂದರ ಪ್ರವೇಶ ಆಗುತ್ತೆ. ಕಥೆಯಲ್ಲಿ ಸದಾನಂದ ಕುಂದಾಪುರ ಮೂಲದವರೆಂದು ತಿಳಿಸಿದ್ದರೂ ಅಲ್ಲೊಂದು ಇಲ್ಲೊಂದು ಕುಂದಾಪುರ

ಭಾಷೆ ಇಣುಕಿದರೂ ಭಾಷೆಯ ದಾಟಿ ಮಂಗಳೂರು ಶೈಲಿಯಲ್ಲಿದೆ. ರಾಜು ಸದಾನಂದರ ಜತೆ ಅವರ ಊರಿಗೆ ಹೋಗಬೇಕಾದ ಸ್ಥಿತಿ ಬರುತ್ತದೆ. ರಾಜು ಸದಾನಂದರ ವ್ಯಕ್ತಿತ್ವದಿಂದ ತುಂಬಾ

ಆಕರ್ಷಿತನಾಗುತ್ತಾನೆ. ಸದಾನಂದರು ರಮಾನಂದರ ಜಿಗ್ರೀ ದೋಸ್ತ್ ಎಂದು ಅರಿವಾದಾಗ ಅವರ ಜತೆ

ರಮಾನಂದರನ್ನು ಭೇಟಿ ಆಗಲು ಮುಂಬಯಿಗೂ ತೆರಳುತ್ತಾನೆ.

ಇಲ್ಲಿ ಮಧ್ಯೆ ಸದಾನಂದರ ಮನೆಯ ಆಳುಕಾಳುಗಳ ಬಗ್ಗೆ ಮತ್ತು ಅಡುಗೆಭಟ್ಟ ಮತ್ತು ಮನೆಯ ಉಸ್ತುವಾರಿ ನೋಡಿಕೊಳ್ಳುವ ತಂತ್ರಿ ಅವನ ಹೆಂಡತಿ ಮೂಕಿ ಅಂಬಮ್ಮ.. ಸದಾನಂದರ.. ನಿಗೂಢ ವಿಲಕ್ಷಣ ವ್ಯಕ್ತಿತ್ವ, ಅವರ ಅಮ್ಮ ಜಲಾಜಕ್ಷಮ್ಮನವರ ಪ್ರೀತಿ, ಎಲ್ಲಾ ಪಾತ್ರಗಳು ಬಹಳ ಪೂರಕವಾಗಿ ಕಥೆಯ ಜತೆಜತೆಗೆ ಸಾಗುತ್ತವೆ.

ಮುಂಬಯಿ ಇಂದ ಮರಳಿದ ರಾಜುವಿಗೆ ಮೂರ್ಚೆರೋಗ ಕಾಡುತ್ತದೆ.. ಆಮೇಲೇ ಜಾನಕಿಯ ಮದುವೆ ರಾಜುವಿನೊಡನೇ ಆಗುತ್ತದೆಯೇ.. ಕಮಲಾಳ ಕಥೆ ಏನು.. ಗೌರಿಯ ಜೀವನ ಯಾವ ತಿರುವು ಪಡೆದುಕೊಳ್ಳುತ್ತದೆ.. ರಾಜುವಿನ ನಡೆ ರಾಮಣ್ಣನವರ ತೊಳಲಾಟ.. ಎಲ್ಲಾ ತುಂಬಾ ಪರಿಣಾಮಕಾರಿಯಾಗಿ ಮೂಡಿ ಬಂದಿದೆ ಏನಾಗುತ್ತದೆ ಎಂದು ತಿಳಿದುಕೊಳ್ಳಲು ಕಥೆಯೇ ಓದಬೇಕು..ಆದರೆ ಕೊನೆಯಲ್ಲಿ ತುಂಬಾ ತ್ವರಿತವಾಗಿ ಕಥೆ ಮುಗಿಸಿದರೇನೋ ಎಂದನ್ನಿಸಿದರೂ ಇನ್ನೂ ಎಳೆದರೆ ಅಷ್ಟು ಪರಿಣಾಮಕಾರಿಯಾಗಿ ಇರುತ್ತಿರಲಿಲ್ಲವೇನೋ ಎಂದು ಕೂಡ ಅನ್ನಿಸಿತು.

ಲೇಖಕಿ ತುಂಬಾ ದೂರಾಗಾಮಿ, ಪ್ರಗತಿಗಾಮಿ ಆಲೋಚನೆಯುಳ್ಳವರು ಎಂಬುದು ತುಂಬಾ ನಿಚ್ಚಳವಾಗಿ ಈ ಕಥೆಯಲ್ಲಿ ಕಂಡುಬರುತ್ತದೆ.

ತಿಳಿಯಾದ ಹಾಸ್ಯ.. ಡಕೋಟಾ ಲಕ್ಷ್ಮಿನಾರಾಯಣ ಬಸ್ಸ್ ಅದರ ಡ್ರೈವರ್ ಶಿಂಗ್ರಿಯ ಬೈಗುಳ.. ಅನಾಥ ಹುಡುಗ ಬಚ್ಚುವಿನ ನಿಷ್ಕಲ್ಮಶ ಕಾಳಜಿ.. ಯಂಟಮ್ಮನ ಪಾತ್ರ ರಾಮಣ್ಣನವರ ಹಾಗೂ ರಾಜುವಿನ ನಿರ್ಮಲ ಮನಸ್ಸು..ಮೂರ್ತಿಯ ಇಬ್ಬಂದಿತನ... ಕಮಲಳ ತಳಮಳ, ಗೌರಿಯ ಹುಡುಗಾಟಿಕೆಯ ಪಾತ್ರದಲ್ಲೂ ಕಾಣುವ ಗಟ್ಟಿ ವ್ಯಕ್ತಿತ್ವ ಅಲ್ಲಲ್ಲಿ ಸುಳಿವ ಶೀನು, ಸಾಚಿ, ಜಾನಕಿ ಶಾಮಣ್ಣನವರ ಹೆಣ್ಣು ಹೆತ್ತ ತಂದೆಯ ಯೋಚನೆ.. ದೇಶ್ಮುಖರವರ ಕುಟುಂಬದವರ ವ್ಯಕ್ತಿತ್ವ.. ಅವರ ಮಗ ಮಧುಕರನ ಪಾತ್ರ ಎಲ್ಲವೂ ಒಂದಕ್ಕೊಂದು ಮಿಳಿತವಾಗಿ ಕಥೆ ಆಗಿನ ಕಾಲದ್ದೆಂದು ಅನ್ನಿಸುವುದೇ ಇಲ್ಲಾ..

ಮೊಬೈಲ್ ಬಳಕೆ ಇಲ್ಲದಿರುವುದರಿಂದ ಕಥೆ ಆಗಿನ ಕಾಲದ್ದೆಂದು ಹೇಳಬಹುದು.

ಸದಾನಂದದ ಎರಡನೆಯ ಭಾಗ ಮಧುವನದಲ್ಲಿ ಸದಾನಂದ ಮತ್ತು ಕಮಲಾರ ವಿವಾಹ ಜೀವನ ಸದಾನಂದರ ವ್ಯಕ್ತಿತ್ವದ ಅನಾವರಣವಾಗಿದೆ

-o-



## ಪ್ರಯಾಣ..

-ಭಾರ್ಗವಿ ಜೋಶಿ...

ಅರುಂಧತಿ ಅವಸರದಲ್ಲಿ ಓಡಿ ಬಂದು KSTRC ಬಸ್ ಹತ್ತಿ ಕಿಟಕಿಯ ಪಕ್ಕದಲ್ಲಿ ಖಾಲಿ ಇದ್ದ ಸೀಟ್ ಅಲ್ಲಿ ಕುಳಿತು ಉಸ್ಸಪ್ಪಾ ಅಂತಾ ಉಸಿರು ಬಿಟ್ಟಳು.. ಏನಪ್ಪ ಈ ಬಸ್ ರಶ್ ಇಲ್ಲ ಸೀಟ್ ಇಷ್ಟೊಂದು ಖಾಲಿ ಅದ ಹೆಂಗ,, ಅಲ್ಲಾ ಅಷ್ಟಕ್ಕೂ ಈಗ ಮಟಾ ಮಟಾ ಮಧ್ಯಾನ್ಹ ಇಂಥ ಸುಡು ಸುಡು ಬಿಸಿಲೊಳಗ್ ನಾ ಒಬ್ಬಾಕಿ ಊರಿಗೆ ಹೊಂಟೀನಿ ಅಂದ್ರೆ ಎಲ್ಲರು ನನಹಂಗ್ ಮೂರ್ಖರು ಇರ್ತಾರೆನು ಅಂತಾ ಮನಸೊಳಗೆ ನಕ್ಕಳು. ಗವರ್ನಮೆಂಟ್ ಬಸ್ ಅದು ಹಳ್ಳಿಗೆ ಹೊಂಟದ್ದು ಎಷ್ಟೋ ದಿವಸದ ಮೇಲೆ ಹತ್ತಿದಂಗ ಆಗಿತ್ತು. ಕಡಿಸರಿ ಯಾವಾಗ್ ಹತ್ತಿದ್ದೆ ಅನ್ನೋ ನೆನಪೇ ಇಲ್ಲ ಈಗ ಏನೋ ಅಗತ್ಯವಾಗಿದೆ ಹೋಗಲೇ ಬೇಕಾಗಿದ್ದು ಬಂತು ಒಬ್ಬಳೇ ಬಸ್ ಹತ್ತಿ ಹೊರಟಿದ್ದಳು. ಕಂಡಕ್ಟರ್ ಗೆ ಆಧಾರ್ ಕಾರ್ಡ್ ತೋರ್ಸಿ ಫ್ರೀ ಟಿಕೆಟ್ ತಗೊಂಡು ಮನಸೊಳಗೆ ಸರ್ಕಾರಕ್ಕೊಂದು ಥ್ಯಾಂಕ್ಸ್ ಹೇಳಿ, ಈ ಸಂಸಾರ, ಮಕ್ಕಳು, ಕೆಲಸ, ಕಾಣದ ಕೈ ಆಡಿಸುತ್ತಿರವ ಆಟಕ್ಕೆ ಬೀಸುತ್ತಿರುವ ಚಾಟಿಗೆ ತಿರಗುತ್ತಿರುವ ಬುಗುರಿಗಳಂತೆ ಈಗಿನ ಮೆಕ್ಯಾನಿಕಲ್ ಲೈಫ್ ... ದಿನ ಓಡೋದು ಓಡೋದು ಯಾವುದಕ್ಕಾಗಿ ಓಡತೇವಿ, ಯಾವುದರ ಹಿಂದೆ ಓಡುತೇವಿ ಅನ್ನೋ ಪರಿವೆ ಇಲ್ಲದೆ ಓಡತೇವಿ.. ಬಂಧು, ಬಳಗ, ಚೊಲೋ ಕಾರ್ಯಕ್ರಮ, ಕೆಟ್ಟದ್ದು, ಯಾವುದಕ್ಕೂ ಹೋಗಲಿಕ್ಕೆ ಟೈಮ್ ಇಲ್ಲ, ಅತೀ ಅನಿವಾರ್ಯಕ್ಕೆ ಹೋಗಲೇ ಬೇಕು ಅಂದಾಗ್ ಕಾರೋ ಗಿರೋ ತಗೊಂಡು ಕರೆಕ್ಟ್ ಟೈಮ್ ಗೆ ಹೋಗೋದು, ಫಾರ್ಮಲಿಟಿ ಗೆ ಕುಶಲೋಪರಿ ವಿಚಾರಿಸೋದು ಒಂದು ಆರ್ಟಿಫಿಷಿಯಲ್ ಸ್ಮೈಲ್ ಕೊಟ್ಟು ಫೋಟೋ ತೆಗಿಸಿಕೊಳ್ಳೋದು, ಉಡುಗೊರೆ ಕೊಡೋದು, ರಿಟರ್ನ್ ಗಿಫ್ಟ್ ಇಸ್ಕೊಳ್ಳೋದು ಅಷ್ಟೇ ಅಲ್ಲಾ ಮತ್ತೆ ಅವು ಕೊಟ್ಟು ರಿಟರ್ನ್ ಗಿಫ್ಟ್ ಚೊಲೋ ಅದನೋ ಇಲ್ಲೋ ಅಂತಾ ಆಡಿಕೊಳ್ಳೋದು ಇಷ್ಟೇ ನೋಡ್ರಿ ಈಗಿನ ಬಾಂಧವ್ಯ... ಹೀಗೆ ಯೋಚಿಸುತ್ತ ಕಿಟಕಿ ಗೆ ಒರಗಿ ಹಂಗೆ ಒಂದು ರೌಂಡ್ ನೆನಪಿನ ಅಂಗಳದಲ್ಲಿ ವಾಕ್ ಹೊರಟಳು...

ನಾವು ಸಣ್ಣವರಿದ್ದಾಗ ಏಪ್ರಿಲ್ -ಮೇ ಸೂಟಿ ಅಂದ್ರೆ ಸಾಕು ದೊಡ್ಡಮ್ಮ, ಮೌಶಿ, ಕಾಕಾ, ಮಾಮಾ ಹಿಂಗ್ ಯಾವ ಊರಿಗೆ ಯಾರ್ ಮನಿಗೆ ಮೊದಲು ಹೋಗೋದು ಎಷ್ಟು ದಿನ ಬಿಡಾರ, ಆಮೇಲೆ ಎಲ್ಲೇ ಹೋಗೋದು ಅನ್ನೋ ಯೋಜನೆ ತಯಾರ್ ಮಾಡ್ತಿದ್ವಿ. ಬಳಗದವರೆಲ್ಲ ಒಂದೇಕಡೆ ಸೇರೋದು. ಮೊದಲು ಹೆಚ್ಚಾಗಿ ಹಳ್ಳಿಯಲ್ಲಿರೋ ದೊಡ್ಡಮ್ಮನ ಮನೆ. ಅಲ್ಲಿ ಮನಿ ತುಂಬಾ ಮಂದಿ. ನಾವು ಊರಿಂದ ಹೋದವು ಸೇರಿ ಕನಿಷ್ಠ ೪೦ ಜನ.



ಬೆಳಿಗ್ಗೆ ಎದ್ದು ಮೌಶಿಗಳೆಲ್ಲ ದೊಡ್ಡ್ ಪಾತ್ರೆ ಉಪ್ಪಿಟ್ಟು ಮಾಡಿದ್ರೆ ನೋಡಿ ನೋಡೋದ್ರೊಳಗ ಖಾಲಿ, ಅದರ ರುಚಿ ಇವತ್ತು ನಾವು ಮಾಡುವ ತರಾವರಿ ತಿಂಡಿಗಳೊಳಗ ಸಿಗೋದಿಲ್ಲ..

ಒಂದೊಂದು ದಿವಸ ಅಂತರು ಅವರು ಬೆಳಿಗ್ಗೆ ಎದ್ದ ಕೂಡ್ಲೇ ಬಿಸಿ ಬಿಸಿ ಭಕ್ಕರಿಗೆ (ಜೋಳದ ರೊಟ್ಟಿ ) ಹಂಚು ಹಾಕಿದ್ರಂತು ಮುಗಿತು ಒಬ್ಬೊಬ್ಬರೇ ತಟ್ಟಿ ಒಳಗ್ ಹಾಕಿಸಿಕೊಂಡು ತಿನ್ನಲಿಕ್ಕೆ ಚಾಲು. ೧-೨-೩ ಲೆಖ್ಖ ಇಲ್ಲ. ಅವರು ಮಾಡಲಿಕ್ಕೆ ಒಂದು ದಿವಸ ಬ್ಯಾಸರ ಮಾಡಿಕೊಳ್ಳುತ್ತಿರಲಿಲ್ಲ. ಆರು ಜನ ಅಮ್ಮಂದಿರು ಅಲ್ಲಿ ಸೇರಿರೋ ೨೦-೩೦ ಮಕ್ಕಳು. ಹೊರಗಿಂದ ಬಂದವರಿಗೆ ಯಾರ ಮಕ್ಕಳು ಯಾರು ಅನ್ನೋದು ತಿಳಿಯುತ್ತಿದ್ದಿಲ್ಲ ಅಂಥಾ ಅನುಬಂಧ. ನಮ್ಮ ಬಳಗ, ನಿಮ್ಮ ಬಳಗ ಅಂತಾ ಭೇಧ ಅಂತೂ ಇರಲೇ ಇಲ್ಲ.. ತಿಂದಷ್ಟು ತಿನಸು, ಉಂಡಷ್ಟು ಊಟ, ಪಟ್ಟಷ್ಟು ಖುಷಿ.
ಆಮೇಲೆ ಬೇಕಾದಷ್ಟು ಬಿಸಿಲಿರಲಿ ಮಳಿ ಇರಲಿ ಮನೆ ಇಂದ ಸ್ವಲ್ಪ್ ದೂರ ಇದ್ದ ಹೊಲಕ್ಕೆ ನಮ್ಮ್ ಸೈನ್ಯ. ಹೋಗೋ ದಾರಿ ಒಳಗ್ ಎಷ್ಟೋ ಮಾತು, ಹರಟೆ, ಒಬ್ಬರಿಗೊಬ್ಬರು ಕಾಡಿಸೋದು, ಕಾಲೆಳೆಯೋದು ಒಂದ ಎರೆಡ.....

ಹೊಲಕ್ಕೆ ಹೋಗಿ ಈಜು ಕಲಿಯೋಕೆ ಆಸಕ್ತಿ ಇರೋಲ್ರಿಗೆಲ್ಲ ಟ್ರೇನಿಂಗ ಬಾವಿ ಒಳಗ್, ಯಾವ್

ಸ್ವಿಮ್ಮಿಂಗ್ ಪೂಲ್, ಸೂಟ್, ಯಾವ ಅಗತ್ಯ ಇಲ್ಲ. ಸೈಕಲ್ ಕಲಿಯೋವರಿಗೆ ಸೈಕಲ್ ಓಡಿಸೋ ಟ್ರೇನಿಂಗ ಹೊಲದೋಳಗ ಆಮೇಲೆ ಸಾಕಾಗೊವರೆಗೂ ಕಬ್ಬು ತಿನ್ನೋದು, ಕಾಕಾ ಗೋಂಜಾಳದ ತೆನೆ ಸುಟ್ಟು ಕೊಡೋವು. ಅದರಮೇಲೆ ಯಳನೀರು ಕಾಯಿ ಸೀದಾ ಗಿಡದಿಂದ ಇಳಿಸಿ,ಅದರ ರುಚಿ ವರ್ಣಿಸಲಿಕ್ಕೆ ಸಾಧ್ಯ ಇಲ್ಲ. ಅಲ್ಲಿ ವಾತಾವರಣ,ತಂಪನ ಗಾಳಿ, ಮಾತುಗಳು, ಅದರ ನಡುವೆ ಅಕ್ಕನ ಮಗಳೇ, ನನ್ನ ಮದ್ವೆ ಮಾಡ್ಕೋ ಅಂತ ತಮಾಷೆ ಮಾಡುವ ಸೋದರ ಮಾವಂದಿರು, ನೀನ್ ಕಟ್ಕೊಂಡ್ರೆ ಅಷ್ಟೇ ಅನ್ನೋ ಅತ್ತೆ ಮಕ್ಕಳು, ಹೊತ್ತು ಹೋಗಿದ್ದು ತಿಳಿತಿರಲಿಲ್ಲ.

ಕತ್ತಲ ಆಗ್ತದ್ ಲಗು ಮನಿ ಸೇರ್ಕೊರಿ ಅಂತಾ ಯಾರಾದ್ರೂ ಬುದ್ಧಿ ಹೇಳಿದಾಗಲೇ ಮನಿ ನೆನಪಾಗೋದು. ಸಂಜೆ ಮನಿಗೆ ಸೇರೋದ್ರೊಳಗ ಬಾಜು ಮಲ್ಲಪ್ಪನ ಅಂಗಡಿ ಗಿರ್ಮಿಟ್, ಮಿರ್ಚಿ, ಉಳ್ಳಾಗಡ್ಡಿ ಭಜಿ, ಅದರ ಜೊತಿ ಬಿಸಿ ಬಿಸಿ ಚಹಾ. ಇನ್ನೇನ್ ಬೇಕ್ರಿ ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ ಸರ್ವಜ್ಞ. ಇಷ್ಟೆಲ್ಲಾ ತಿಂದ್ರು ಮತ್ತೆ ರಾತ್ರೀ ಬಿಸಿ ಬಿಸಿ ಅನ್ನಾ ಝುಣಕಾ. ಯಾರಿಗೂ ಅಪಚಿನ,ಆಸಿಡಿಟಿ, ಇವೆಲ್ಲ ಸಮೀಪನು ಬರ್ತಿರಲಿಲ್ಲ.. ರಾತ್ರೀ ಪಡಸಾಲಿ ತುಂಬಾ ಹಾಸಿಗೆ. ಆ ತಂಪು ನೆಲಕ್ಕೆ, ಬೆಚ್ಚಗಿನ ರಗ್ಗು, ಕಂಬಳಿ, ಫ್ಯಾನಿನ ಗಾಳಿಗೆ, ಯಾರ ಪಕ್ಕದಲ್ಲಿ ಯಾರು ಮಲ್ಕೊಬೇಕು ಅನ್ನೋದಕ್ಕೆ ಎಲ್ಲದಕ್ಕೂ ಜಗಳಾ. ಮಲಗಿದ್ರೆ ಎಂತ ಚಂದ ನಿದ್ದಿ. ಯಾವ ಚಿಂತೆ, ಭಯ, ಆತಂಕ ಹತ್ತಿರ ಸುಳಿತಿರಲಿಲ್ಲ. ಮತ್ತೆ ಬೆಳಗ್ಗೆ ದೊಡ್ಡೋವ್ರೆಲ್ಲ ಎದ್ದು ಬಿಸಿ ನೀರು ಕಾಯಿಸುವ ಹಂಡೆಗೆ ಉರಿಹಾಕಿ ಸ್ನಾನಕ್ಕೆ ನೀರು ಕಾಸಿ, ಬಿಸಿ ಬಿಸಿ ಚಹಾ ತಯಾರ ಮಾಡಿ ಎಬ್ಬಿಸಿದಾಗ ಎಚ್ಚರ.

ಅಲ್ಲೇ ಲಕ್ಷ್ರಿ ಜೀವನ ಇರಲಿಲ್ಲ ಹೃದಯ ಶ್ರೀಮಂತಿಕೆ ಇತ್ತು.. ಇವತ್ತು ನಾವು ಸಾವಿರಗಟ್ಟಲೆ ಖರ್ಚು ಮಾಡೋ ವೀಕೆಂಡ್ ಪಾರ್ಟಿ ಒಳಗ್ ಆ ಖುಷಿ, ರುಚಿ, ಆತ್ಮೀಯತೆ ಸಿಗಲಿಕ್ಕೆ ಸಾಧ್ಯನೇ ಇಲ್ಲ...
ಈಗ ಇವೆಲ್ಲ ಬರಿ ನೆನಪುಗಳು...

ಹ್ಮ.. ಇಷ್ಟೆಲ್ಲಾ ಕಣ್ಣ ಮುಂದೆ ದಾಟಿ ಹೋಗೋದ್ರೊಳಗ ಇಳಿಯೋ ಜಾಗ ಬಂತು, ಇಳಿದು ಹೋಗಿ ಕೆಲಸ ಮುಗಿಸಿ ಮತ್ತೆ ವಾಪಾಸ್ ಬರ್ಬೇಕಲ್ಲ.. ಸಂಜೆ ಸಮಯ ಬಸ್ ತುಂಬಾ ಗದ್ದಲಿರುತ್ತದೆಯಂತೆ.

ವಾಪಾಸ್ ಹೋಗೋಕೆ ಮತ್ತೆ ಬಸ್ ಸ್ಟಾಂಡ್ ಗೆ ಬಂದು ಬಸ್ ಗಾಗಿ ಕಾಯುತ್ತ ನಿಂತಾಗ ಒಂದು ಬಸ್ ಮಿಸ್ ಆತು.. ಎರೆಡನೆ ಬಸ್ ಬರುವ ವರೆಗು ಮನಸು ಬುದ್ಧಿ ಹೇಳಿತು. ನೀ ಹಿಂಗೇ ನಿಂತ್ರೆ ಇವತ್ತ ಬಸ್ ಸಿಗೋದಿಲ್ಲ, ನೀ ಊರು ಮುಟ್ಟೋದಿಲ್ಲ ಅಂತಾ.. ಸ್ಟೈಲ್ ಗೆ ಮತ್ತೆ ಬಿಸಿಲಿಗೆ ಅಂತ ಹಾಕಿದ ಸನ್ ಗ್ಲಾಸ್, ವಾಚು, ಮೊಬೈಲ್ ಎಲ್ಲ ವಾನಿಟಿ ಬ್ಯಾಗ್ ಒಳಗ್ ಹಾಕಿ, ಸೀರೆ ಸೆರಗು ಅಡ್ಡ ಕಟ್ಟಿ ನೀರಿಗೆ ಗಟ್ಟಿಯಾಗಿ ಹಿಡಿದುಕೊಂಡು ಒಂದು ಕ್ಷಣ ಮನಸೊಳಗೆ ಓಬವ್ವನ ನೆನಪಿಸಿಕೊಂಡು ಬಸ್ ಬರೋದೇ ತಡ ನುಗ್ಗಿದ್ದೆ, ಸೀಟ್ ಹಿಡಿದಿದ್ದೆ, ಅದು ಮತ್ತೆ ಕಿಟಕಿ ಸೀಟ್ ಸಿಕ್ಕಾಗ ಆರ್ಸೈಬಿ ದವ್ರು ಕಪ್ ಗೆದ್ದಷ್ಟು ಖುಷಿ.. ಸಾಧನೆಯ ಮಂದಹಾಸ... ಜೀವನ ಶೈಲಿ ಬದಲಾದ್ರು ಮೈ ಒಳಗ್ ಹರಿತಾ ಇರೋದು ಅಪ್ಪಟ ಉತ್ತರ ಕರ್ನಾಟಕದ ಜವಾರಿ ರಕ್ತ ಅಲ್ಲಾ ಏನ್ರೀ.. ಸೀಟ್ ಬಿಟ್ಟೆವಾ ಎಲ್ಲರೆ....

-o-



## ನೆರಳು

-ಅಪರ್ಣಾದೇವಿ

ಮನುಜನ ಬೆನ್ನಹಿಂದೆ ಕರ್ಮದ ಫಲಗಳು
ಹಿಂಬಾಲಿಸಿ ಬರುತಿದೆ ಇವುಗಳದೇ ನೆರಳು
ಒಳಿತು ಕೆಡುಕಲಿ ಸಾಗುವುದು ನಮ್ಮೀಬಾಳು
ತಿರುಗುತಿದೆ ಜೀವನ ಚಕ್ರವು ಹಗಲಿರುಳು

ಬಾಲ್ಯ ಯೌವನ ವೃದ್ಧಾಪ್ಯದ ಘಟ್ಟದಲಿ
ಸಾಗುತಿದೆ ಬದುಕು ನೋವು ನಲಿವಿನಲಿ
ವೇಗವಾಗಿ ಚಲಿಸುವ ನಿಲ್ಲದ ಸಮಯದಲಿ
ಭಾಗಿಯಾಗಿ ನಡೆದು ಒಳ್ಳೆಯ ಕೈಂಕರ್ಯದಲಿ

ಭಾಗ್ಯವದು ಒಲಿದು ನರಜನ್ಮ ಬಂದಿರಲು
ಯೋಗ್ಯ ಕೆಲಸಕೆ ಸಮಯವಿರಲಿ ಮೀಸಲು
ಸಂಸ್ಕಾರದ ಸಿರಿ ಬದುಕಿಗೆ ಬಲವಾಗಿರಲು
ತಾಯಿ ತಂದೆಯರ ವಾತ್ಸಲ್ಯ ಹರಸಿರಲು

ಸುವಿದ್ಯೆ ಕಲಿತು ಸನ್ಮಾರ್ಗದಲಿ ನಡೆಯಬೇಕು
ಸತ್ಯವನು ಆಡುತ ಧರ್ಮವ ಪಾಲಿಸುತಿರಬೇಕು
ಸತ್ಕರ್ಮದ ಫಲಗಳನು ಪಡೆದು ನಲಿಯಬೇಕು
ಸಚ್ಚಾರಿತ್ರ್ಯದ ಛಾಯೆಯಲಿ ಜಯ ಪಡೆಯಬೇಕು

-o-





## ನೆಲ ಸೇರಿದ ಹೂ ಮೈಲಿಗೆಯಲ್ಲ

-ಡಾ। ಅಭಿಷೇಕ್ ಭಾರದ್ವಾಜ್ ಬಿ ಕೆ

ಮರದಿಂದ ಬಿದ್ದ ಹೂ ಶವವೆಂದರು
ಅದು ಅಪವಿತ್ರವೆಂದರು
ಸತ್ತ ಶವದ ಘೋರಿಯ ಮೇಲೆ
ಹೂ ಗಿಡವ ನೆಟ್ಟರು
ಅವನ ದೇಹದ ಅಂಗಾಗಳ ಕೊಳೆತ
ಗೊಬ್ಬರದಿ ಫಲವಾಗಿ ಬೆಳೆದು
ಹೂವಾಗಿ ಅರಳಿ ಮುಕ್ತಿ ಪಡೆಯಲೆಂದು

ಮಸಣದ ಹೂಗಳೇ ಶ್ರೇಷ್ಠವೆಂದನು ಶಿವ
ಕಾಲ ರುದ್ರನ ಅರ್ಚಿಪ ಹೂಗಳಿಗೆಂತ ಮೈಲಿಗೆ
ದುರ್ಗಂಧದ ಮೈಲಿರುವುದು
ಕುಸುಮಕ್ಕಲ್ಲ ದುರ್ಗುಣ ತುಂಬಿದ ಮೈಗೆ

ನೆಲಸೇರಿದ ಪಾರಿಜಾತಕ್ಕೆ ಮನಸೋತಿಹನು ಹರಿ
ಧರೆಯನಪ್ಪಿದ ಪುಷ್ಪ ತನ್ನೆದೆಯ ಆನಂದ ವೆಂದು
ಅಮೃತದ ಬಿಂದುವಿನ ಮರುಹುಟ್ಟೆಂದು
ಮಡಿ ಮೈಲಿಗೆಯು ನೆಲ ಸೇರಿದ ಹೂಗಳಿಗಲ್ಲ
ಮೂಢಮತಿಗೆಟ್ಟ ಮನುಜನ ದುಷ್ಮನಕೆ

-o-

# ಎಲ್ಲಾ ಮುಗಿದ ಮೇಲೆ

-ಸೌಭಾಗ್ಯ ಪಾಟೀಲ್

ಇದ್ದ ಒಂದು ಎಕರೆ ಜಮೀನಿನಲ್ಲಿ ಜೀವನ ನಡೆಸೋದು ಸಾಧ್ಯವೇ... ಅಪ್ಪ, ಅವ್ವನನ್ನು ನೋಡಕೋಬೇಕು.ಹೆಂಡತಿ ಮೂರು ಜನ ಮಕ್ಕಳು. ತಮ್ಮ ತಮ್ಮನ ಸಂಸಾರ. ಜೀವನ ಸಾಗಿಸೋದು ಕಷ್ಟ ಅನಿಸತೊಡಗಿತು ಸತೀಶನಿಗೆ. ಪಟ್ಟಣಕ್ಕೆ ಹೋಗಿ ಏನಾದರೊಂದು ಕೆಲಸ ಮಾಡಿ ಜೀವನ ನಡೆಸುವುದು ಎಂದು ಸತೀಶನ ಹೆಂಡತಿ ಪಾರ್ವತಿ ನಿರ್ದರಿಸಿ ಆಗಿತ್ತು. ತಮ್ಮನ ಸಂಸಾರ ತಂದೆ ತಾಯಿಯರ ಜೊತೆ ಹಳ್ಳಿಯಲ್ಲಿ ವಾಸವಾಗಿತ್ತು.

ಪಾರ್ವತಿ ಗಟ್ಟಿಗಿತ್ತಿ ಎಂಥ ಕಷ್ಟದಲ್ಲೂ ಕುಗ್ಗಿದವಳಲ್ಲ.ಗಂಡನಿಗೆ ಹೆಗಲುಕೊಟ್ಟು ದುಡಿದವಳು. ಮೂರು ಜನ ಮಕ್ಕಳನ್ನು ಒಳ್ಳೆಯ ಶಾಲೆಗೆ ಸೇರಿಸಿ ಓದಿಸುತ್ತಿದ್ದಳು.

ಜೀವನೋಪಾಯಕ್ಕೆ ಅಂತ ಕ್ಯಾಂಟೀನ್ ತೆಗೆದಿದ್ದಳು. ಕಾಲೇಜಿನ ಹತ್ತಿರ ಕ್ಯಾಂಟೀನ್ ಇರೋದರಿಂದ ಕ್ಯಾಂಟೀನ್ ಏನೋ ಚೆನ್ನಾಗೆ ನಡೆದಿತ್ತು. ಆದರೇ...ಇತ್ತೀಚೆಗೆ ಸತೀಶನ ವರ್ತನೆಯಲ್ಲಿ ಬದಲಾವಣೆ ಕಂಡಿತ್ತು.ಇತರ ಮಹಿಳೆಯೊಂದಿಗೆ ತನ್ನ ಗಂಡನಿಗೆ ಅನೈತಿಕ ಸಂಬಂಧವಿದ್ದ ವಿಷಯ ಪಾರ್ವತಿಗೆ ತಡವಾಗಿ ತಿಳಿದಿತ್ತು.ಅದಾಗಲೇ ವಯಸ್ಸಿಗೆ ಬಂದ ಮಕ್ಕಳು. ಮಕ್ಕಳ ಎದುರಿಗೆ ವಿಷಯದ ಬಗ್ಗೆ ಚರ್ಚೆ ಬೇಡ ಎಂದು ಸೂಕ್ಷ್ಮವಾಗಿ ವಿಷಯವನ್ನು ಬಗೆಹರಿಸುವ ಪ್ರಯತ್ನ ಮಾಡಿ ಸೋತಿದ್ದಳು. ಮಕ್ಕಳಿಗೂ ವಿಷಯ ತಿಳಿದಿತ್ತು. ಅದೊಂದು ಬಗೆ ಹರಿಯದ ಸಮಸ್ಯೆಯಾಗಿ ಪರಿಣಮಿಸಿ ಕುಟುಂಬದ ನೆಮ್ಮದಿ ಹಾಳಾಯಿತು.ಇಷ್ಟು ದಿನ ಬಡತನ ಬಡತನವೊಂದೇ ಸಮಸ್ಯೆಯಾಗಿತ್ತು. ಗಂಡ ಹೆಂಡತಿಯರ ಮನಸ್ತಾಪದಿಂದ ನೆಮ್ಮದಿಯು ಹಾಳಾಯಿತು.

ಕ್ರಮೇಣ ಸತೀಶ ಪ್ರತಿನಿತ್ಯ ಮನೆಗೆ ಬರುವದನ್ನೇ ಬಿಟ್ಟಿದ್ದ.ಮನೆಗೆ ಬರಲಿಲ್ಲವೆಂದಾಗ ಅವಳ ಮನೆಯಲ್ಲಿರುವದು ಪಾರ್ವತಿಗೆ ತಿಳಿದಿತ್ತು. ಸುಮಾರು ವರ್ಷಗಳಿಂದ ಇದು ಹೀಗೆ ಮುಂದುವರೆಯಿತು.

ಎಂದಿನಂತೆ ಸತೀಶ ಮನೆಗೆ ಬರಲಿಲ್ಲ. ನಾಲ್ಕು ದಿನಗಳೇ ಆಯ್ತು ಸತೀಶ ಬರಲೇ ಇಲ್ಲ. ಹೀಗೆ ದಿನಗಳು ಉರುಳಿದವು ಸತೀಶನ ಸುಳಿವಿಲ್ಲ. ಪಾರ್ವತಿಗೆ ಮನಸ್ಸಲ್ಲಿ ವ್ಯಕ್ತಪಡಿಸಲಾಗದ ತಳಮಳ, ಸಂಕಟ. ಹೀಗಾದಾಗ ಮರಳಿ ಬರುವನೆಂಬ ನಂಬಿಕೆ ಇರುತ್ತಿತ್ತು.

ಒಂದು ದಿನವೋ ಎರಡು ದಿನವೋ ಅವಳ ಮನೆಯಲ್ಲಿ ಉಳಿದು ತಿರುಗಿ ಬರುತ್ತಿದ್ದ. ಆದರೇ... ಈ ಬಾರಿ ಆ ನಿರೀಕ್ಷೆ ಸುಳ್ಳಾಗಿತ್ತು. ಪಕ್ಕದ ಮನೆಯ ಶಾರದಮ್ಮನ ಮುಂದೆ ಪ್ರತಿ ನಿತ್ಯ ತನ್ನ ಗಂಡನ ವಿಷಯವಾಗಿ ಹೇಳಿ ಅಳುತ್ತಿದ್ದಳು.ಸುಮಾರು ದಿನಗಳು ಕಾದಾಯಿತು. ಸ್ನೇಹಿತರು, ಬಂದು ಬಳಗದವರು, ಪರಿಚಿತರು ಎಲ್ಲರ ಮನೆಗಳಲ್ಲೂ ಹುಡುಕಿದ್ದಾಯಿತು. ಎಲ್ಲಿಯೂ ಸತೀಶನ ಸುಳಿವಿಲ್ಲ. ಕೊನೆಗೆ ಎಲ್ಲರ ಸಲಹೆಯಂತೆ ಪೋಲಿಸ್ ಕಂಪ್ಲೇಂಟ್ ಕೊಟ್ಟಾಯಿತು. ಅಪರಿಚಿತ ಶವವೊಂದರ ಪತ್ತೆ ಕಾರ್ಯದಲ್ಲಿ ತೊಡಗಿದ್ದ ಪೋಲಿಸರು ಕಂಪ್ಲೇಂಟ್ ದಾಖಲಿಸಿಕೊಂಡರು.

ಅಪರಿಚಿತ ಶವದ ಬಳಿ ಯಾವುದೇ ಗುರುತುಗಳು ಇಲ್ಲದ ಕಾರಣ, ಶವದ ಬಟ್ಟೆಯ ಮೇಲಿದ್ದ ದರ್ಜಿಯ ಅಂಗಡಿಯ ಹೆಸರನ್ನು ಹುಡುಕಲು ಪ್ರಾರಂಬಿಸಿದರು. ದರ್ಜಿಯು ಬಟ್ಟೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇದು ಸತೀಶನ ಬಟ್ಟೆ ಎಂದು ಗುರುತಿಸಿದ್ದಾಯಿತು. ಮನೆಯವರು ಫೋಟೋ ಸಮೇತ ಕೊಟ್ಟ ಕಂಪ್ಲೇಂಟ್, ದರ್ಜಿಯ ಸಹಾಯದಿಂದ ಸತೀಶ ಶವವಾಗಿರುವ ವಿಷಯ ಪೋಲೀಸಿನವರಿಂದ ಮನೆಯವರಿಗೆ ತಿಳಿಯಿತು.

ಪಾರ್ವತಿಯ ಆಕ್ರಂದನ ಮುಗಿಲು ಮುಟ್ಟಿತು. ಅಷ್ಟಕ್ಕೂ ಸತೀಶ ಸತ್ತಿದ್ದಾದರೂ ಹೇಗೆ ಸತೀಶನ ಶವ ಏನಾಯಿತು?.. ಈ ಪ್ರಶ್ನೆಗಳಿಗೆ ತನಿಖೆಯ ನಂತರ ತಿಳಿದ ಉತ್ತರವಿದು. ಮನೆಯವರೊಡನೆ ಮನಸ್ಥಾಪ ಮಾಡಿಕೊಂಡು ಮನೆಯಿಂದ ಹೋಗಿದ್ದ ಸತೀಶ. ಅಲೆಮಾರಿಯಾಗಿ ಅಲೆಯುತ್ತಿದ್ದ. ಒಂದು ದಿನ ಆಟೋ ಹತ್ತಿ ಹೊರಟವನಿಗೆ ಹೃದಯಾಘಾತವಾಗಿತ್ತು.

ಆಟೋಚಾಲಕನೊಬ್ಬ ಅವನನ್ನು ಆಸ್ಪತ್ರೆಗೆ ದಾಖಲಿಸಿದ್ದ. ಮನೆಯವರಿಗೆ ವಿಷಯ ತಿಳಿಸಲು ಆತನಲ್ಲಿ ಯಾವುದೇ ಆಧಾರಗಳಿರಲಿಲ್ಲ. ಚಿಕಿತ್ಸೆ ಫಲಕಾರಿಯಾಗದೇ ಸತೀಶ ಕೊನೆ ಉಸಿರೆಳೆದಿದ್ದ. ಪೋಲೀಸರಿಗೆ ಮಾಹಿತಿಯನ್ನು ತಿಳಿಸಿದ ಆಟೋ



ಚಾಲಕ ಆತನ ಸಂಬಂಧಿಗಳಾರು ಬರದಿದ್ದಾಗ ತಾನೇ ಶವಸಂಸ್ಕಾರದ ವಿಧಿ ವಿಧಾನಗಳನ್ನು ಮಾಡಿ ಮುಗಿಸಿದ್ದ. ವಿಚಿತ್ರವೆಂದರೆ ತನ್ನ ಮನೆಯ ಹತ್ತಿರವಿರುವ ರುದ್ರ

ಭೂಮಿಯಲ್ಲಿಯೇ ಸತೀಶನ ಶವಸಂಸ್ಕಾರವಾದದ್ದು. ಇಷ್ಟಾದರೂ ಮನೆಯವರಿಗೆ ಇದಾವುದರ ಪರಿವೆಯೇ ಇರಲಿಲ್ಲ. ಕಂಬಕ್ಕೆ ಒರಗಿ ಕುಳಿತ ಪಾರ್ವತಿ ತದೇಕಚಿತ್ತದಿಂದ ಆಕಾಶವನ್ನೇ ನೋಡುತ್ತಿದ್ದಳು ಅವಳ ಕಣ್ಣಾಲಿಗಳು ತುಂಬಿದ್ದವು.

-o-

## ಪಂಜರದ ಗಿಳಿ

✍ಸೌಮ್ಯಾಗುರುರಾಜ್.



ನಿಜ, ನಾ ಅರಿವೆ ನಿನ್ನ ಮನವ
ಕಾರಣ ನಾನೊಬ್ಬ ಮನೆ ಮಗಳೂ...
ಮನೆಯ ತುಂಬಿ ಬಂದಿಹೆನು
ಮರುಗುವ ಗುಣ ತೊರೆದು ನಿಂತಿಹೆನು !

ಪಂಜರದ ಗಿಳಿ ಎಂದು ನೀ...
ಕೊರಗದಿರು ಮಾತೃಮಯಿ ನೀ..
ಮನೆಗೆ ಸುಂದರ ಸಂಸಾರದ ಒಡತಿ..
ಕೆಚ್ಚೆದೆಯ ಮನದ ಚಂದಗಾತಿ !

ಮಮತೆ ತುಂಬಿದ ಮಮತಾಮಯಿ ನೀ...
ಕೊರಗಿ ದೇಹವ ಹದಗೆಸಿಕೊಳ್ಳದಿರು ನೀ...
ನಿನ್ನ ಮನೆ ಮನದ ಒಡತಿಯೂ ನೀನೆ...
ದೇಹವೆಂಬ ದೇಗುಲದ ಪೂರಜಾರಿ ನೀನೆ !

-o-

## ಪುಸ್ತಕ ವಿಮರ್ಶೆ

-ಶುಭಾ ಶ್ರೀನಾಥ್

೧೫೦ಕ್ಕಿಂತ ಹೆಚ್ಚು ಕಾದಂಬರಿಗಳನ್ನು ಬರೆದಿರುವ ಸಾಯಿಸುತೆಯವರ ಕಾದಂಬರಿಗಳಲ್ಲಿ ನನಗೆ ಬಹಳ ಇಷ್ಟವಾದದ್ದು ' ಮಂತ್ರಾಕ್ಷತೆ '




' ಮಂತ್ರಾಕ್ಷತೆ ' ಕಾದಂಬರಿಯಲ್ಲಿ ಸಂತೋಷ್ ಒಬ್ಬ ಸ್ವಂತ ಉದ್ಯೋಗ ಮಾಡುವ ಶ್ರೀಮಂತ ಆತನ ತಂದೆ ಮತ್ತು ಅಣ್ಣ ಇಬ್ಬರು ಅಕಾಲದಲ್ಲಿ ಮರಣ ಹೊಂದಿದ್ದರಿಂದ ಸಂತೋಷ್ ವ್ಯವಹಾರದಲ್ಲಿ ಆಸಕ್ತಿ ಇಲ್ಲದಿದ್ದರೂ ಅನಿವಾರ್ಯವಾಗಿ ವ್ಯವಹಾರವನ್ನು ಮುನ್ನಡೆಸಬೇಕಾಗುತ್ತದೆ. ಸಂತೋಷ್ ವ್ಯವಹಾರದ ಒತ್ತಡದಿಂದ ಹೃದಯಘಾತಕ್ಕೆ ಒಳಗಾಗಿ ಮನೆಯಲ್ಲಿ ಇದ್ದು ಕೆಲವು ಕಾಲ ವಿಶ್ರಾಂತಿ ಪಡೆಯಬೇಕೆಂದು ಡಾಕ್ಟರು ಹೇಳುತ್ತಾರೆ. ಅದರಂತೆ ಸಂತೋಷ್ ಮನೆಯಲ್ಲಿದ್ದಾಗ ಮನೆಯಲ್ಲಿ ಎಲ್ಲರ ಸ್ವಭಾವಗಳು ತಿಳಿಯುತ್ತವೆ. ತನ್ನ ಹೆತ್ತ ತಾಯಿ ಮತ್ತು ಅಣ್ಣನ ಮಗ ಅಲೋಕ್ ಇಬ್ಬರನ್ನು ಬಿಟ್ಟರೆ ಬೇರೆಲ್ಲರೂ ಸ್ವಾರ್ಥಿಗಳು.

ಒಲುಮೆಯ ಹೆಂಡತಿ ನಿಹಾರಿಕ ಇಬ್ಬರು ಮುದ್ದು ಮಕ್ಕಳನ್ನು ಕೊಟ್ಟವಳು ಮತ್ತು ಎಷ್ಟೋ ಗೌರವಿಸುವ ಅತ್ತಿಗೆ ಮಧುರ ಇಬ್ಬರೂ ಸಂತೋಷ ಬದುಕಿದ್ದರೂ ಕೂಡ ಅವನ ಎದುರಿಗೆ ಆಸ್ತಿಯನ್ನು ಪಾಲು ಮಾಡುವ ವಿಚಾರಕ್ಕಾಗಿ ಜಗಳವಾಡುತ್ತಾರೆ. ನಿಹಾರಿಕ ತವರು ಮನೆಯವರು ನಿನಗಿನ್ನು ಚಿಕ್ಕ ವಯಸ್ಸು ಜೊತೆಗೆ ಎರಡು ಹೆಣ್ಣು ಮಕ್ಕಳು ಎಂದು ನಿಹಾರಿಕಾಗೆ ಆಸ್ತಿಯಲ್ಲಿ ಹೆಚ್ಚಿನ ಪಾಲನ್ನು ತೆಗೆದುಕೊಳ್ಳಲು ಕುಮ್ಮಕ್ಕು ಕೊಟ್ಟರೆ ಅತ್ತ ಅತ್ತಿಗೆಯ ತವರಿನವರು ಕೂಡ ಅತ್ತಿಗೆಗೆ ಆಸ್ತಿಪಾಲು ಮಾಡಲು ಕುಮ್ಮಕ್ಕು ಕೊಡುತ್ತಾರೆ. ಆಸ್ತಿ ಪಾಲಾದಾಗ ಚಿಕ್ಕ ಚಿಕ್ಕ ವಿಷಯಗಳಿಗೆ ಮತ್ತು ವಸ್ತುಗಳಿಗೆ ಇಬ್ಬರು ಆಸೆ ಪಟ್ಟು ಜಗಳವಾಡುವುದನ್ನು ನೋಡಿದರೆ ಕೇವಲ ಬಡವರ ಅಥವಾ ಮಧ್ಯಮ ವರ್ಗದವರ ಮನೆಗಳಲ್ಲಿ ಕಾಣಿಸುವ ಇಂಥ ಜಗಳಗಳು ಶ್ರೀಮಂತರ ಮನೆಯಲ್ಲಿ ಕೂಡ ನಡೆಯುತ್ತವೆಯೇ ಎಂದು ಆಶ್ಚರ್ಯವಾಗುತ್ತದೆ. ಸರಸ್ವತಿಯ ವಿಗ್ರಹ ಒಂದಕ್ಕೆ ಮತ್ತು ಸಂತೋಷ್ ಪ್ರವಾಸಕ್ಕೆ ಹೋದಾಗ ತಂದ ಅಲಂಕಾರಿಕ ವಸ್ತು ಒಂದಕ್ಕೆ ಇಬ್ಬರು ಓರಗಿತ್ತಿಯರು ಜಗಳವಾಡುವುದು ನೋವನ್ನು ಉಂಟುಮಾಡುತ್ತದೆ. ಸಂತೋಷ್ ಆ ಸರಸ್ವತಿಯ ವಿಗ್ರಹವನ್ನು ನಾಟ್ಯಶಾಲೆಯೊಂದಕ್ಕೆ ಕಾಣಿಕೆಯಾಗಿ ಕೊಡುತ್ತಾನೆ. ಅದು ಕೂಡ ನಿಜವೇ ಸುಳ್ಳೇ ಎಂದು ನೋಡಿಕೊಂಡು ಬರಲು ನಿಹಾರಿಕಾ ಹೋಗುವುದು ಕೂಡ ಅಷ್ಟೊಂದು ಅನುಮಾನವೇ ಎನಿಸುತ್ತದೆ. ಸಂತೋಷ್ ಎಲ್ಲಿಯಾದರೂ ಕೆಲವು ದಿನ ಮನಸ್ಸನ್ನು ಸಮಾಧಾನ ಮಾಡಿಕೊಳ್ಳಲು ಹೋಗುತ್ತೇನೆ ಎಂದು ಹೊರಟಾಗ ತಾಯಿ ಇಂತಹ ವಾತಾವರಣದಲ್ಲಿ ಮಗನು ಇದ್ದರೆ ಖಂಡಿತ ಅವನ ಆರೋಗ್ಯ ಸುಧಾರಿಸುವುದಿಲ್ಲ ಎಂದು ಮನಗಂಡು ಸಂತೋಷನಿಗೆ ಹೋಗಲು ಸೂಚಿಸುತ್ತಾರೆ.

ಸಂತೋಷನ ಬಾಲ್ಯದ ಗೆಳತಿ ಗಾಯಿತ್ರಿ ಆಶ್ರಮವೊಂದರಲ್ಲಿ ಸಹಾಯಕ್ಕಾಗಿ ಇರುವುದು ತಿಳಿದು ಅಲ್ಲಿಗೆ ಹೋಗುತ್ತಾನೆ. ಗಾಯಿತ್ರಿ ಸಂತೋಷನನ್ನು ಹೃದಯದಲ್ಲಿಟ್ಟು ಪೂಜಿಸಿ, ಆರಾಧಿಸುತ್ತಾ ಇದ್ದಾಳೆ ಎಂದು ತಿಳಿದು ಸಂಭ್ರಮ - ಸಂತೋಷ ಪಡುತ್ತಾನೆ. ಗಾಯಿತ್ರಿಯ ಪ್ರೀತಿಯು ನಿಸ್ವಾರ್ಥವಾಗಿರುತ್ತದೆ. ಸಂತೋಷನ ತಾಯಿ ಅದನ್ನು ತಿಳಿದು ಮತ್ತು ಗಾಯತ್ರಿಯ ಜಾತಕದಲ್ಲಿ ಅವಳಿಗೆ ದೀರ್ಘ ಸುಮಂಗಲಿ ಆಗುವ ಯೋಗವಿದೆ ಎಂದು ತಿಳಿದು ಗಾಯಿತ್ರಿಯನ್ನು ತನಗೆ ಪುತ್ರ ಭಿಕ್ಷೆ ನೀಡಬೇಕೆಂದು ಬೇಡಿಕೊಳ್ಳುತ್ತಾರೆ. ಗಾಯಿತ್ರಿ ಅದಕ್ಕೆ ಒಪ್ಪುತ್ತಾಳೆ ಗಾಯಿತ್ರಿ ಸಂತೋಷನ ಬಾಳಿನಲ್ಲಿ ಮಾತೃತ್ವ ಪ್ರೀತಿಯಿಂದ ಕಾಣುತ್ತಾಳೆ. ಮದುವೆ ಎಂದರೆ ಅಥವಾ ಸಾಂಸಾರಿಕ ಪ್ರೀತಿ ಎಂದರೇನು? ಬರಿ ದೈಹಿಕ ಸುಖ ಮಾತ್ರವಲ್ಲ ಪರಿಶುದ್ಧ ನಿಷ್ಕಲ್ಮಶ ಪ್ರೀತಿ ಕಾಳಜಿ ನಿಸ್ವಾರ್ಥ ಪ್ರೀತಿ ಇವುಗಳೆಲ್ಲ ಹೇಗೆ ಪ್ರಾಮುಖ್ಯತೆ ಪಡೆಯುತ್ತದೆ ಎಂಬುದನ್ನು ಸಾಯಿಸುತೆಯವರು ಬಹಳ ಅರ್ಥಗರ್ಭಿತವಾಗಿ ನೈಜವಾಗಿ ಚಿತ್ರಿಸಿದ್ದಾರೆ. ಸಂತೋಷ್ ಮತ್ತು ಗಾಯತ್ರಿಯ ಮೇಲೆ ಪ್ರಕೃತಿಯ ಮಂತ್ರಾಕ್ಷತೆ ಹಾಕಿ ಮುಂದೆ ೧೦ ವರ್ಷಗಳಾದರೂ ಸಂತೋಷ ಆರೋಗ್ಯವಂತನಾಗಿಯೇ ಇರುತ್ತಾನೆ.

ಆದರೆ ಇದರಿಂದ ನಿಹಾರಿಕ ಬಹಳಷ್ಟು ನಷ್ಟ ಅನುಭವಿಸಬೇಕಾಗುತ್ತದೆ. ಸಂತೋಷ್ ಅಲೋಕನಿಗೆ ಚಿಕ್ಕಪ್ಪನಾದರೂ ಗೆಳೆಯನಂತೆ ಗುರುವಿನಂತೆ ಓಲೈಸುತ್ತಾನೆ. ಆದರೂ ಅದೊಂದು ವಿಷ ಘಳಿಗೆಯಲ್ಲಿ ಅಮ್ಮ ಮತ್ತು ಚಿಕ್ಕಮ್ಮನ ಜಗಳವನ್ನು ಕಂಡು ತಾನು ಇರುವುದರಿಂದ ತಾಯಿ ಆಸ್ತಿಗಾಗಿ ಇಷ್ಟೊಂದು ಆಸೆ ಪಡುತ್ತಾ ಇರುವುದು ತಾನೇ ಇಲ್ಲದೆ ಹೋದರೆ ಎಂದು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಸಂತೋಷ್ ಊರಿನಲ್ಲಿ ಇರುವುದಿಲ್ಲ ಯಾವುದೋ ವ್ಯವಹಾರದ ಮೇಲೆ ಪರವೂರಿಗೆ ಹೋಗಿರುತ್ತಾನೆ. ಅಪ್ಪ ತಾತನ ಜೊತೆಗೆ ಅಲ್ಲಿ ಕ್ರಿಕೆಟ್ ಆಡ್ತೀನಿ, ಆದರೂ ನನಗೆ ಸಾಯಲು ಭಯ ಎಂದು ಪತ್ರ ಬರೆದಿಟ್ಟ ಅಲೋಕನ ವ್ಯಕ್ತಿತ್ವವನ್ನು ಓದಿದಾಗ ಕಣ್ಣಲ್ಲಿ ಎರಡು ಹನಿ ನೀರು ಉದುರದೆ ಇರುವುದಿಲ್ಲ. ಮುಂದೆ ಸಂತೋಷ್ ಆರೋಗ್ಯಕರವಾಗಿ ಇದ್ದು ತನ್ನ ಕಚೇರಿಯಲ್ಲಿ ಕೆಲಸ ಮಾಡುವವರನ್ನು ಆತ್ಮೀಯವಾಗಿ ಕಂಡು ಮತ್ತು ಹಲವಾರು ಕಡೆ ವ್ಯವಹಾರ ನೆಲಕಚ್ಚುತ್ತಿರುವಾಗ ಅದನ್ನೆಲ್ಲ ಖುದ್ದಾಗಿ ತಾನೇ ಮುಂದೆ ನಿಂತು ಸರಿ ಪಡಿಸುತ್ತಾನೆ ವ್ಯವಹಾರದಲ್ಲಿ ಲಾಭವನ್ನು ಗಳಿಸುತ್ತಾನೆ. ಆದರೆ ಅದೆಲ್ಲ ಸಂತೋಷನ ಸ್ವಾರ್ಥಕ್ಕಾಗಿಯೇ ಖಂಡಿತವಾಗಿಯೂ ಅಲ್ಲ ತನ್ನ ಬಳಿ ಕೆಲಸಕ್ಕಾಗಿ ಇರುವ ಎಲ್ಲರ ಒಳಿತಿಗಾಗಿ.

ನಿಹಾರಿಕ ಅದೆಷ್ಟೇ ಚೆಲುವೆಯಾಗಿದ್ದರು ಜೊತೆಗೆ ಅಲಂಕಾರ ಮಾಡಿಕೊಂಡರು ಅವಳ ಮನದ ಸೌಂದರ್ಯ, ಪ್ರೀತಿಸುವ ಗುಣವಿಲ್ಲದೇ ಹೋದರೆ ಅದೆಲ್ಲವೂ ವ್ಯರ್ಥ. ಆಶ್ರಮದ ತಬ್ಬಲಿ ಮತ್ತು ಅನಾಥರಿಗೆ ಸೇವೆಯನ್ನು ಮಾಡುವ ಸರಳ ಸಹಜ ಸುಂದರಿ ಗಾಯತ್ರಿ ಪಾತ್ರ ಮೆಚ್ಚುಗೆಯಾಗುತ್ತದೆ.

ಅಲೋಕನ ಸಾವಿಗೆ ತಾಯಿ ಮಧುರ ಮತ್ತು ಚಿಕ್ಕಮ್ಮ ನಿಹಾರಿಕಾ ಪರೋಕ್ಷವಾಗಿ ಕಾರಣವೇ ಎನಿಸುತ್ತದೆ. ಒಂದು ಹೆಣ್ಣು ಮನಸು ಮಾಡಿದರೆ ಒಂದು ಕುಟುಂಬವನ್ನು ಬೆಳಗಬಹುದು ಅಥವಾ ಅದನ್ನು ಹಾಳು ಮಾಡಬಹುದು ಎನ್ನುವುದು ತಿಳಿದು ಬರುತ್ತದೆ. ನಿಹಾರಿಕ ಮತ್ತು ಮಧುರ ಇಬ್ಬರಲ್ಲಿ ಒಬ್ಬರಾದರೂ ಸ್ವಾರ್ಥತೆಯನ್ನು ಬಿಟ್ಟು ಕೊಂಚ ವಿಶಾಲವಾಗಿ ಯೋಚನೆ ಮಾಡಿದ್ದರೆ ಬಹುಷಃ ಅಲೋಕ್ ಆತ್ಮಹತ್ಯೆಯಂತಹ ಕಾರ್ಯಕ್ಕೆ ಕೈ ಹಾಕುತ್ತಿರಲಿಲ್ಲ. ಹೊರಗೆ ಕೆಲಸಕ್ಕೆ ಹೋಗಿ ದುಡಿಯುವ ಗಂಡಸರಿಗೆ ಮನೆಯಲ್ಲಿ ಶಾಂತಿ ನೆಮ್ಮದಿಯನ್ನು ಪತ್ನಿ ಕೊಟ್ಟರೆ ಮಾತ್ರ ಪತಿ ಆರೋಗ್ಯದಿಂದ ಇರಲು ಸಾಧ್ಯ. ಪ್ರತಿ ಯಶಸ್ವಿ ಪುರುಷನ ಹಿಂದೆ ಹೆಣ್ಣು ಇರುತ್ತಾಳೆ ಎನ್ನುವುದು ತಿಳಿಯುತ್ತದೆ.

ಸಾಮಾನ್ಯವಾಗಿ ಎಲ್ಲಾ ಕಥೆಗಳಲ್ಲಿ ಸ್ತ್ರೀ ಪ್ರಧಾನವಾಗಿ ಹೆಚ್ಚಾಗಿ ಹೆಣ್ಣಿನ ಕಷ್ಟಗಳಿಗೆ ಮಿಡಿಯುವ ಮನಸ್ಸು ಇದ್ದರೆ ಈ ಕಥೆಯಲ್ಲಿ ಸಂತೋಷ ನಿಗಾಗಿ ಮನಸ್ಸು ಮಿಡಿಯುತ್ತದೆ ಹೊರಗಿನ ವ್ಯವಹಾರ ಮತ್ತು ಮನೆಯ ಒಳಗೆ ಅತ್ತಿಗೆ ಮತ್ತು ಹೆಂಡತಿಯ ಜಗಳ ಇವುಗಳಲ್ಲಿ ಹೈರಾಣವಾಗಿ ಬದುಕುವ ಸಂತೋಷನ ಅಸಹಾಯಕ ಪಾತ್ರವು ನೈಜವಾಗಿದೆ.

ಇನ್ನು ಕಥೆಯಲ್ಲಿ ಬರುವ ಪ್ರಕೃತಿಯ ವರ್ಣನೆ, ಆಂಧ್ರ ಪೊಪ್ಪು, ಕರ್ನಾಟಕದ ಗಟ್ಟಿ ಹುಳಿ, ಹೆಚ್ಚು ಎಣ್ಣೆ ಬೆಣ್ಣೆ ಇಲ್ಲದೆ ಮಾಡಿದ ಉಪ್ಪಿಟ್ಟು , ಪೊಂಗಲ್, ಅವಲಕ್ಕಿ ಬೆಲ್ಲ ಕಾಯಿತುರಿ ಇಂತಹ ತಿಂಡಿ ಊಟಗಳ ಬಗ್ಗೆ ಓದಿದಾಗ ಬಾಯಲ್ಲಿ ನೀರು ಬರುತ್ತದೆ. ಇದೆಲ್ಲವೂ ಕಥೆಯ ಸ್ವಾರಸ್ಯವನ್ನು ಹೆಚ್ಚಿಸುತ್ತವೆ. ಕಾದಂಬರಿಯನ್ನು ಓದಿಯೇ ಅದರ ಸ್ವಾದವನ್ನು ಅನುಭವಿಸಬೇಕು.

-o-



## ಲೇಖಕರ ಪರಿಚಯ–

## ಶ್ರೀಮತಿ ರೂಪ ಹೊಸದುರ್ಗ

-ನಾರಾಯಣಸ್ವಾಮಿ ಮಾಲೂರು
ವಕೀಲರು ಮತ್ತು ಲೇಖಕರು



ಕನ್ನಡ ಸಾಹಿತ್ಯ ಲೋಕದಲ್ಲಿ ಇಂದು ಬಹಳಷ್ಟು ಮಹಿಳೆಯರು ಕನ್ನಡದ ಬರವಣಿಗೆಯಲ್ಲಿ ತೊಡಗಿಸಿಕೊಂಡು, ಕನ್ನಡ ಸಾಹಿತ್ಯದ ಬರವಣಿಗೆಯನ್ನು ಪ್ರವೃತ್ತಿಯಾಗಿ ಬಳಸಿಕೊಂಡು ಕವಿತೆ ಕಥೆ ಕಾದಂಬರಿ ಪ್ರಬಂಧ ಮುಂತಾದ ಎಲ್ಲಾ ಸಾಹಿತ್ಯದ ಪ್ರಕಾರಗಳನ್ನು ಬರೆಯುತ್ತಾ ಕನ್ನಡದ ನೆಲದಲ್ಲಿ ತಮ್ಮ ಪ್ರಬುದ್ಧತೆಯನ್ನು ಹೊರ ಹಾಕುತ್ತಾ ಗುರುತಿಸಿಕೊಳ್ಳುತ್ತಿದ್ದಾರೆ.

ಮೊದಮೊದಲ ಸಾಹಿತ್ಯ ಲೋಕದಲ್ಲಿ ಆಡಿಯಿಟ್ಟ ಯುವ ಬರಹಗಾರರು ಪ್ರೇಮ ಪ್ರೀತಿಯ ಬಗ್ಗೆ ಬರೆಯುತ್ತಾ ಸಾಹಿತ್ಯದಲ್ಲಿ ನೆಲೆಯೂರಲು ಪ್ರಯತ್ನಿಸುತ್ತಾರೆ. ಇತ್ತೀಚಿಗೆ ಕನ್ನಡ ಸಾಹಿತ್ಯ ಲೋಕಕ್ಕೆ ಸೇರಿ ಮೊದಲಿಗೆ ಕಾದಂಬರಿಯನ್ನು ಬರೆಯುವ ಮೂಲಕ ಕಾದಂಬರಿಗಾರ್ತಿ, ಕವಯಿತ್ರಿಯಾಗಿ, ಸಂಪನ್ಮೂಲ ವ್ಯಕ್ತಿಯಾಗಿ, ನಿರೂಪಕಿಯಾಗಿ, ಪತ್ರಕರ್ತೆಯಾಗಿಯೂ ಗುರುತಿಸಿಕೊಳ್ಳುತ್ತಿರುವ ಪ್ರತಿಭೆಯೇ ಶ್ರೀಮತಿ ರೂಪಾ ಹೊಸದುರ್ಗರವರು.

ಶ್ರೀಮತಿ ರೂಪಾ ಹೊಸದುರ್ಗರವರು ದಿನಾಂಕ ೧೬-೦೭-೧೯೯೧ ರಂದು ಶ್ರೀ ಮುನಿಮಾರೇಗೌಡ ಮತ್ತು ಶ್ರೀಮತಿ ಶಿವರತ್ನಮ್ಮ ನವರ ಮಗಳಾಗಿ ಕೋಡಿಹಳ್ಳಿ ಹೋಬಳಿಯ, ಕನಕಪುರ ತಾಲ್ಲೂಕಿನ, ರಾಮನಗರ ಜಿಲ್ಲೆಯಲ್ಲಿ ಬರುವ ಹೊಸದುರ್ಗ ಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ಶಿಕ್ಷಣವನ್ನು ಗರಳಾಪುರದಲ್ಲಿ ಮುಗಿಸಿ ಪ್ರೌಢಶಾಲಾ ಶಿಕ್ಷಣವನ್ನು ಕೊಡಿಹಳ್ಳಿಯ ಶಾರದಾ ಪ್ರೌಢಶಾಲೆಯಲ್ಲಿ ಪಡೆದುಕೊಂಡರು. ಮುಗಿಸಿದರು.

ಪದವಿಪೂರ್ವ ಶಿಕ್ಷಣವನ್ನು ಕನಕಪುರದ ವಿದ್ಯಾದಾನಿ ಮತ್ತು ಕರ್ಮಯೋಗಿ ಕರಿಯಪ್ಪನವರ ರೂರಲ್ ಕಾಲೇಜಿನಲ್ಲಿ ಮುಗಿಸಿ ಕೋಡಿಹಳ್ಳಿಯ ಸರ್ಕಾರಿ ಕಾಲೇಜಿನಲ್ಲಿ ಪದವಿಯನ್ನು ಪಡೆದುಕೊಂಡರು. ನಂತರ ಉನ್ನತ ವ್ಯಾಸಂಗವನ್ನು ಮುಂದುವರಿಸಿದ ಇವರು ಅರ್ಥಶಾಸ್ತ್ರ ಮತ್ತು ಕನ್ನಡ ವಿಷಯಗಳಲ್ಲಿ ಮೈಸೂರಿನ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪಡೆದರು. ನಂತರ ಶಿಕ್ಷಕರ ತರಬೇತಿಯನ್ನು ಕನಕಪುರದ ಶ್ರೀ ದೇಗುಲ ಮಠದ ವಿದ್ಯಾಸಂಸ್ಥೆಯಲ್ಲಿ ಪೂರೈಸಿದರು.

ಬಾಲ್ಯದಿಂದಲೇ ಸಾಹಿತ್ಯದ ಬಗ್ಗೆ ಅಸಕ್ತಿ ಇದ್ದ ಇವರು ಪ್ರೌಢಶಾಲೆಯ ಹತ್ತನೇ ತರಗತಿ ತಲುಪುವಾಗಲೇ ಸುಮಾರು ಕವಿತೆಗಳನ್ನು ರಚಿಸಿದ್ದರು. ಕನ್ನಡ ಭಾಷೆಯ ಮೇಲೆ ಮತ್ತು ಕನ್ನಡ ವಿಷಯ ಬಗ್ಗೆ ಅತೀವ ಅಸಕ್ತಿಯಿದ್ದಿದ್ದರಿಂದ ಹತ್ತನೆ ತರಗತಿಯಲ್ಲಿ ಹೆಚ್ಚಿನ ಅಂಕಗಳನ್ನು ಪಡೆದು ಇಡೀ ಶಾಲೆಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿದ್ದರು. ಮಾತುಗಾರಿಕೆಯನ್ನು ಕರಗತ ಮಾಡಿಕೊಂಡಿದ್ದ ಇವರು ಶಾಲಾ ಕಾಲೇಜುಗಳಲ್ಲಿ ನಡೆಯುವ ಚರ್ಚಾಸ್ಪರ್ಧೆ ಭಾಷಣ ಮಾಡುವಂತಹ ಸ್ಪರ್ಧೆಗಳಲ್ಲಿ ಭಾಗವಹಿಸಿ ಮೊದಲ ಬಹುಮಾನಗಳನ್ನು ಪಡೆಯುತ್ತಿದ್ದರು. ೨೦೦೭ ರಲ್ಲಿ ಹತ್ತನೇ ತರಗತಿಯಲ್ಲಿ ಕನ್ನಡ ವಿಷಯದಲ್ಲಿ ಅತಿ ಹೆಚ್ಚು ಅಂಕ ಗಳಿಸಿಕೊಂಡಿದ್ದಕ್ಕಾಗಿ ಕನ್ನಡ ಸಂಸ್ಕೃತಿ ಪ್ರಶಸ್ತಿಯನ್ನು ಪಡೆದರು.

ಶ್ರೀಮತಿ ರೂಪಾ ಹೊಸದುರ್ಗರವರು ಶಿಕ್ಷಣ ಮುಗಿದ ನಂತರ ಶಿಕ್ಷಕಿಯಾಗಿ ವೃತ್ತಿಯನ್ನು ಆರಂಭಿಸಿ ಬೆಂಗಳೂರಿನ ಕಿಡ್ಸ ಕುಟೀರ ಶಾಲೆಯಲ್ಲಿ ಮುಖ್ಯ ಶಿಕ್ಷಕಿಯಾಗಿ ಕೆಲಸವನ್ನು ನಿರ್ವಹಿಸಿದರು. ವೃತಿಯ ಜೊತೆಯಲ್ಲಿ ಕನ್ನಡ ಸಾಹಿತ್ಯವನ್ನು ಪ್ರವೃತ್ತಿಯಾಗಿಸಿಕೊಂಡು ಮೊದಲ ಬಾರಿಗೆ 'ಬಂಧಗಳ ಬಲೆಯೊಳಗೆ' ಕಾದಂಬರಿ ೨೦೨೨ನೇ ವರ್ಷದಲ್ಲಿ ಚೊಚ್ಚಲ ಕೃತಿಯಾಗಿ ಲೋಕಾರ್ಪಣೆ ಮಾಡಿದರು ನಂತರ ೨೦೨೩ ನೇ ವರ್ಷ ಮನದ ಚಿಪ್ಪಲಿ ಬಿರಿದ 'ಮುತ್ತುಗಳು' ಕವನ ಸಂಕಲನವನ್ನು ಬಿಡುಗಡೆ ಮಾಡಿ ಓದುಗರ ಮನದಾಳವನ್ನು ತಲುಪಿದರು.

ಇವರ ಪ್ರತಿಭೆಯನ್ನು ಗುರುತಿಸಿ ಕರುನಾಡಿನ ಹಲವಾರು ಸಂಘಸಂಸ್ಥೆಗಳು ಇವರಿಗೆ ಹಲವಾರು ಪ್ರಶಸ್ತಿಗಳನ್ನು ನೀಡಿ ಸನ್ಮಾನಿಸಿ ಗೌರವಿಸಿವೆ. ಕುವೆಂಪು ಕರ್ನಾಟಕ ಜನಪರ ವೇದಿಕೆ, ಬೆಂಗಳೂರು ಇವರು ೨೦೨೩ ರಲ್ಲಿ ತ್ರಿವೇಣಿ ಯುವ ಕಾದಂಬರಿ ಪ್ರಶಸ್ತಿಯನ್ನು, ಜಯಬಸವ ತಪೋವನ, ಚಿಕ್ಕಮಗಳೂರು ಇವರು ೨೦೨೩ ಬಸವ ಭೂಷಣ ಪ್ರಶಸ್ತಿಯನ್ನು ಹೊಂಗನಸು ಚಾರಿಟಬಲ್ ಟ್ರಸ್ಟ್ ಬೆಂಗಳೂರು ಇವರು ೨೦೨೩ರಲ್ಲಿ ಹೊಂಗನಸು ಸೇವಾರತ್ನ ಪ್ರಶಸ್ತಿಯನ್ನು ಚೇತನ ಫೌಂಡೇಷನ್ ಧಾರವಾಡ ಇವರು ೨೦೨೩ರಲ್ಲಿ ಕರುನಾಡ ಚೇತನ ಪ್ರಶಸ್ತಿಯನ್ನು, ಇದು ನಿಮ್ಮ ವಾಹಿನಿ ಕಲಾವೇದಿಕೆಯವರು ೨೦೨೩ರಲ್ಲಿ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿವೆ.

ಪ್ರಸ್ತುತ ಬೆಂಗಳೂರಿನ ಎಸ್.ಎಸ್.ಬಿ ಇಂಟರ್ನ್ಯಾಷನಲ್ ಶಾಲೆಯಲ್ಲಿ ಕನ್ನಡ ಶಿಕ್ಷಕಿಯಾಗಿ ಕೆಲಸ ನಿರ್ವಹಿಸುತ್ತಿರುವ ಇವರು ರಾಜ್ಯದ ಹಲವಾರು ರಾಜ್ಯಮಟ್ಟದ ಕಾರ್ಯಕ್ರಮಗಳಲ್ಲಿ ಕವಿಗೋಷ್ಠಿ ಕಾರ್ಯಕ್ರಮಗಳಲ್ಲಿ ಬಹಳಷ್ಟು ಶಾಲಾ ಕಾಲೇಜು ಸಮಾರಂಭಗಳಲ್ಲಿ ಮುಖ್ಯ ಭಾಷಣಗಾರ್ತಿಯಾಗಿ. ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದಾರೆ. ಬಹಳಷ್ಟು ಕಾರ್ಯಕ್ರಮಗಳಲ್ಲಿ ಕಾರ್ಯಕ್ರಮದ ನಿರೂಪಿಯಾಗಿಯೂ ಕೂಡ ಭಾಗವಹಿಸಿ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಿದ್ದಾರೆ. ಇವರ ಕವನ ಸಂಕಲನದಿಂದ ಆಯ್ದ ಒಂದು ಕನ್ನಡ ನಾಡಿನ ಬಗ್ಗೆ ಬರೆದಂತಹ ಕವಿತೆಯನ್ನು ಹಾಡಾಗಿಸಿ ಸಿಡಿ ರೂಪದಲ್ಲಿ ಬಿಡುಗಡೆ ಮಾಡಿದರು.

ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಹಲವಾರು ರಂಗಗಳಲ್ಲಿ ಗುರುತಿಸಿಕೊಳ್ಳುತ್ತಿರುವ ಶ್ರೀಮತಿ ರೂಪ ಹೊಸದುರ್ಗ ರವನ್ನು. ಅಭಿನಂದಿಸುತ್ತಾ ಮುಂದೆ ಹಲವಾರು ಕೃತಿಗಳನ್ನು ಹೊರತಂದು ಕನ್ನಡ ಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಲಿ. ಆ ಕೃತಿಗಳು ಮನುಜನ ಬದುಕಿನ ತಲ್ಲಣಗಳಾಗಲಿ.

ತಮ್ಮ ಬರಹ ವೈಚಾರಿಕತೆ ಪ್ರಬುದ್ಧತೆಯೆಡೆಗೆ ಸಾಗಿ ಸಮಾಜದಲ್ಲಿ ಗೌರವ ಪುರಸ್ಕಾರಗಳು ಸಿಗಲಿ ಎಂದು ಪತ್ರಿಕೆಯ ಪರವಾಗಿ ಮತ್ತು ವೈಯಕ್ತಿಕವಾಗಿ ಹಾರೈಸುತ್ತೇನೆ. ಶುಭವಾಗಲಿ

-o-

## ಶುಭ ಚಿಂತನ

-ಶ್ರೀದೇವಿ ಓಂಕಾರ್

ಜೀವನ ಎಂದರೆ ಎಂದೋ ಓದಿ ಬಿಸಾಕುವ ಪುಸ್ತಕವಲ್ಲ. ಪ್ರತಿದಿನ ಓದಬೇಕಾದ ನಿತ್ಯ ನೂತನ ಪುಸ್ತಕ.ಅದಕ್ಕೆ ಕೊನೆ ಪುಟ ಇರುವುದಿಲ್ಲ..!! ಒಳ್ಳೆಯ ಸಂಬಂಧಗಳು ಪುಸ್ತಕವಿದ್ದಂತೆ. ಪುಸ್ತಕ ಎಷ್ಟೇ ಹಳೆಯದಾದರೂ ಅದರಲ್ಲಿನ ಪದಗಳು ಬದಲಾಗುವುದಿಲ್ಲ..!! ನಮ್ಮ ಜೀವನದ ಸಂತೋಷವು ನಮ್ಮ ಗುಣ ಮಟ್ಟದ ವಿಚಾರಗಳ ಮೇಲೆ ಅವಲಂಬಿತವಾಗಿದೆ. ಹಾಗಾಗಿ ಸಕಾರಾತ್ಮಕವಾಗಿ ಯೋಚಿಸೋಣ..!! ಮನೆಯ ಪ್ರತಿ ಸದಸ್ಯರ ಬಗ್ಗೆ ಗೌರವ ಇರಲಿ, ಒಬ್ಬರನ್ನು ತುಂಬಾ ಗೌರವಿಸುವುದು, ಇನ್ನೊಬ್ಬರನ್ನು ಕೀಳು ಮಟ್ಟದಿಂದ ನೋಡುವುದು ದಯವಿಟ್ಟು ಮಾಡಬೇಡಿ, ಹಿರಿಯರೇ ಇರಲಿ,ಕಿರಿಯರೇ ಇರಲಿ ಪ್ರತಿ ಒಬ್ಬರ ಜೊತೆಗೆ ವಿನಯದಿಂದ ಮಾತನಾಡಿ, ಹಾಗೆಂದರೆ ಅವರೂ ನಮಗೆ ಖಂಡಿತ ಗೌರವ ಕೊಡುತ್ತಾರೆ, ಮಕ್ಕಳ ಜೊತೆ ಅಥವಾ ಹಿರಿಯ ಜೊತೆ ಮಾತನಾಡುವಾಗ ಅವರ ಮಾತನ್ನೂ ಕೇಳಬೇಕು," ನಾನು ಹಿರಿಯ ಸದಸ್ಯ ನನ್ನ ಮಾತು ಎಲ್ಲರೂ ಕೇಳಬೇಕು, ನಾನು ಹೇಳಿದ್ದೇ ನಡೆಯಬೇಕು" ಎನ್ನುವ ಆಲೋಚನೆ ಬಿಟ್ಟು ಬಿಡಬೇಕು, ನಾವೆಲ್ಲರೂ ಒಂದೇ ಎನ್ನುವ ಮನಸ್ಸು ಇರಲಿ, ಮಕ್ಕಳನ್ನು ಯಾವತ್ತಿಗೂ ಅವಮಾನಿಸ ಬೇಡಿ,ಮಕ್ಕಳೇ ಮನೆಗೆ ಮಾಣಿಕ್ಯ ಅಲ್ಲವೇ ಸ್ನೇಹಿತರೇ..

-o-



# ಮಾನವ ಸಂಪನ್ಮೂಲ ನಿರ್ವಹಣೆ

-ಶ್ರೀನಾಥ್ ಹೆಚ್.ಸಿ

ಸಾಮಾನ್ಯವಾಗಿ ಎಲ್ಲರೂ ತಿಳಿದಿರುವಂತೆ ದೇಶದ ಆರ್ಥಿಕತೆಗೆ ಕೈಗಾರಿಕೆಗಳು, ಕೃಷಿ, ಗಣಿಗಾರಿಕೆ ವಿಜ್ಞಾನ-ತಂತ್ರಜ್ಞಾನ ಇತ್ಯಾದಿಗಳು ಪ್ರಮುಖವಾಗಿರುತ್ತದೆ. ವಿಶೇಷವಾಗಿ ಕೈಗಾರಿಕೆಗಳಿಗೆ ಹಲವು ಸಂಪನ್ಮೂಲಗಳು ಬೇಕಾಗುತ್ತವೆ. ಉದಾಹರಣೆಗೆ ಭೂಮಿ, ಕಟ್ಟಡ, ಯಂತ್ರಗಳು, ಬಂಡವಾಳ, ಸಂಸ್ಥೆ ಮತ್ತು ಕೆಲಸಗಾರರು.

ಬೇರೆ ಎಲ್ಲ ಸಂಪನ್ಮೂಲಗಳನ್ನು ಬಂಡವಾಳ ಹೂಡುವ ಮೂಲಕ ಖರೀದಿಸಬಹುದು ಹಾಗೂ ಸ್ಥಾಪಿಸಬಹುದು. ಆದರೆ ಅಲ್ಲಿ ಕಾರ್ಯನಿರ್ವಹಿಸಲು ದಕ್ಷ ಹಾಗೂ ನುರಿತ ಅಧಿಕಾರಿಗಳು ಹಾಗೂ ಕೌಶಲ್ಯಪೂರಿತ ಕೆಲಸಗಾರರು ಅತ್ಯಂತ ಅವಶ್ಯಕ. ಹಾಗಾಗಿ ಅವರನ್ನೆಲ್ಲ ಒಟ್ಟಾಗಿ ಮಾನವ ಸಂಪನ್ಮೂಲ ಎಂದು ಹೆಸರಿಸಲಾಗಿದೆ. ಯಾವ ದೇಶದಲ್ಲಿ ಇಂತಹ ಮಾನವ ಸಂಪನ್ಮೂಲ ಅಧಿಕವಾಗಿರುತ್ತದೆ ಆ ದೇಶಕ್ಕೆ ಯಾವುದೇ ರೀತಿಯ ಬಡತನ ಹಾಗೂ ಕಷ್ಟಗಳು ಇರುವುದಿಲ್ಲ.

ಹಾಗಾದರೆ ಭಾರತವು ಪ್ರಪಂಚದಲ್ಲಿ ಅತ್ಯಂತ ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು ನಾವು ಏಕೆ ಶ್ರೀಮಂತ ರಾಷ್ಟ್ರವಾಗಿಲ್ಲ ಎಂಬ ಅನುಮಾನ ಸಹಜವಾಗಿ ಬರುತ್ತದೆ. ಮಾನವ ಸಂಪನ್ಮೂಲ ಎಂದರೆ ಸಮಸ್ತ ಜನಸಂಖ್ಯೆ ಎಂದು ಅಲ್ಲ. ಯಾವಾಗ ಮಾನವನು ಕೌಶಲ್ಯ, ಕಾರ್ಯಕ್ಷಮತೆ, ಬುದ್ಧಿವಂತಿಕೆ, ದಕ್ಷತೆಯಿಂದ ಕಾರ್ಯನಿರ್ವಹಿಸಬಲ್ಲನೊ ಅಂತಹ ಮಾನವನನ್ನು ಮಾತ್ರ ಸಂಪನ್ಮೂಲ ಎಂದು ಕರೆಯಬಹುದು.

ಮಾನವ ಸಂಪನ್ಮೂಲವನ್ನು ನಿರ್ವಹಣೆ ಮಾಡುವುದು ಕೂಡ ಒಂದು ಸವಾಲಿನ ವಿಷಯ. ಏಕೆಂದರೆ ಬೇರೆ ಉಳಿದೆಲ್ಲ ಸಂಪನ್ಮೂಲಗಳು ನಿರೀಕ್ಷೆಯಂತೆ ಸೀಮಿತವಾಗಿರುತ್ತವೆ ಆದರೆ ಮಾನವ ಸಂಪನ್ಮೂಲ ಮಾತ್ರ ಅನಿರೀಕ್ಷಿತ ಬದಲಾವಣೆಗಳನ್ನು ತಂದು ಕೊಡಬಲ್ಲದು. ಸ್ವಲ್ಪ ಸುಲಭವಾಗಿ ಅರ್ಥ ಮಾಡಿಕೊಳ್ಳುವುದಾದರೆ ಒಂದು ಯಂತ್ರ ಸ್ಥಾಪನೆಯಾದಾಗ ಅದರಿಂದ ಏನು ಉತ್ಪಾದಿಸಲು ಸಾಧ್ಯವೇ ಅದು ಯಾವುದೇ ಬದಲಾವಣೆಯಿಲ್ಲದೆ ನಡೆಯುತ್ತದೆ. ಅದೇ ಆ ಯಂತ್ರವನ್ನು ಚಲಾಯಿಸಲು ನೇಮಕಗೊಳ್ಳುವ ಮಾನವ ಒಂದೇ ರೀತಿಯ ಉತ್ಪಾದನೆಯನ್ನು ಮಾಡುತ್ತಾನೆ ಎಂದು ಭಾವಿಸಲು ಸಾಧ್ಯವಿಲ್ಲ. ಅವನ ನಡುವಳಿಕೆಯಲ್ಲಿ ಹಾಗೂ ಉತ್ಪಾದಕತೆಯಲ್ಲಿ ವ್ಯತ್ಯಾಸವಾಗುವುದು ಸಹಜ.

ಈ ಮೇಲಿನ ವಿವರಣೆಯಿಂದ ನಾವು ಪ್ರಮುಖವಾಗಿ ತಿಳಿಯಬೇಕಾದ ವಿಷಯವೆಂದರೆ ನಾವು ಮಾನವ ಸಂಪನ್ಮೂಲವನ್ನು ಸರಿಯಾಗಿ ನಿರ್ವಹಣೆ ಮಾಡುವುದರ ಮೂಲಕ ಒಂದು ಸಂಸ್ಥೆಯನ್ನು ಮೇಲ್ಮಟ್ಟಕ್ಕೆ ಎತ್ತಲು ಸಾಧ್ಯವಿದೆ ಅದೇ ರೀತಿ ದೇಶದ ಮಾನವ ಸಂಪನ್ಮೂಲದ ಅಭಿವೃದ್ಧಿಯನ್ನು ಕೈಗೊಂಡಾಗ ಆದೇಶವು ಸಂಪದ್ಭರಿತ ದೇಶವಾಗುವುದರಲ್ಲಿ ಯಾವುದೇ ಅನುಮಾನವಿಲ್ಲ .

ನಮ್ಮ ದೇಶದಲ್ಲಿ ನಾವು ಜನಸಂಖ್ಯೆಯನ್ನು ಒಂದು ಸಮಸ್ಯೆಯನ್ನಾಗಿ ಭಾವಿಸುತ್ತೇವೆ. ಅದೇ ನಮಗಿಂತಲೂ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಚೀನಾದೇಶವು ಆರ್ಥಿಕತೆಯಲ್ಲಿ ಭಾರತಕ್ಕಿಂತ ಹತ್ತು ಪಟ್ಟು ಮುಂದಿದೆ. ಹಿಂದೆ ಚೀನಾವು ಕೂಡ ಜನಸಂಖ್ಯೆಯ ಸಮಸ್ಯೆಯಿಂದ ಬಳಲುತ್ತಿತ್ತು ಆದರೆ ಅಲ್ಲಿ ಮಾನವ ಸಂಪನ್ಮೂಲವನ್ನು ಯಶಸ್ವಿಯಾಗಿ ನಿರ್ವಹಣೆ ಮಾಡುವ ಮೂಲಕ ದೇಶವನ್ನು ಪ್ರಗತಿಯತ್ತ ಕೊಂಡೊಯ್ದಿದ್ದಾರೆ.

ಇದಿಷ್ಟು ಮಾನವ ಸಂಪನ್ಮೂಲ ಹಾಗೂ ದೇಶದ ಆರ್ಥಿಕತೆಯ ನಡುವೆ ಇರುವ ಸಂಬಂಧದ ಬಗ್ಗೆ ಚಿಕ್ಕ ವಿವರಣೆ ಯಾಯಿತು.

ನಾವು ಈಗ ಈ ಮಾನವ ಸಂಪನ್ಮೂಲದ ನಿರ್ವಹಣೆಯನ್ನು ಒಂದು ಸಂಸ್ಥೆಯು ಯಾವ ರೀತಿ ಮಾಡಬಹುದು ಎಂಬ ಬಗ್ಗೆ ಚರ್ಚಿಸೋಣ.

ಮಾನವ ಸಂಪನ್ಮೂಲ ನಿರ್ವಹಣೆಯಲ್ಲಿ ಮೊದಲನೆಯದಾಗಿ ಸಂಸ್ಥೆಯು ಮಾನವ ಸಂಪನ್ಮೂಲದ ಯೋಜನೆಯನ್ನು ಸಿದ್ಧಪಡಿಸಬೇಕಾಗುತ್ತದೆ. ಅಂದರೆ ಸಂಸ್ಥೆಯ ಉತ್ಪಾದನೆಗೆ ಹಾಗೂ ವ್ಯವಹಾರಕ್ಕೆ ಬೇಕಾಗುವ ಸಿಬ್ಬಂದಿ ವರ್ಗ ಹಾಗೂ ಕಾರ್ಮಿಕ ವರ್ಗದ ಅಂಕಿಅಂಶ ಸಿದ್ಧಪಡಿಸಬೇಕಾಗುತ್ತದೆ.

ಉತ್ಪಾದನಾ ಚಟುವಟಿಕೆಗೆ ಲಭ್ಯವಿರುವ ಯಂತ್ರಗಳು ಹಾಗೂ ಅದಕ್ಕೆ ಪೂರಕ ವಾದ ಚಟುವಟಿಕೆಗಳಿಗೆ

ಬೇಕಾಗುವಷ್ಟು ಮಾನವ ಸಂಪನ್ಮೂಲ ಎಷ್ಟು ಎಂಬುದನ್ನು ಮುಂಚೆ ಯೋಚಿಸಬೇಕಾಗುತ್ತದೆ. ಈ ಯೋಜನೆ ಲೋಪದಿಂದ ಕೂಡಿದ್ದರೆ ಅಥವಾ

ವ್ಯತ್ಯಾಸವಾದಲ್ಲಿ ಮುಂದೆ ಸಂಸ್ಥೆಯು ತೊಂದರೆಗೆ ಅಥವಾ ನಷ್ಟಕ್ಕೆ ಸಿಲುಕುವ ಸಾಧ್ಯತೆ ಇರುತ್ತದೆ.

ಈ ಕೆಲಸ ಮುಗಿದ ಮೇಲೆ ಸಂಸ್ಥೆಗೆ ಸಿಬ್ಬಂದಿ ವರ್ಗ ಹಾಗೂ ಕಾರ್ಮಿಕ ವರ್ಗ ಸೇರಿದಂತೆ ಒಟ್ಟು ಎಷ್ಟು ಮಾನವ ಸಂಪನ್ಮೂಲ ಬೇಕೆಂಬುದು ಖಾತ್ರಿಯಾದ ಮೇಲೆ ಮುಂದಿನ ಬೆಳವಣಿಗೆಯಲ್ಲಿ ಸೂಕ್ತ ಮಾನವ ಸಂಪನ್ಮೂಲವನ್ನು ನೇಮಕಾತಿ ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕೆ ಮಾನದಂಡವಾಗಿ ಅವರಿಗೆ ಬೇಕಾಗಿರುವ ವಿದ್ಯಾರ್ಹತೆ ಅನುಭವ ಹಾಗೂ ಅವರಿಗೆ ನೀಡಬೇಕಾಗಿರುವ ಸಂಬಳ ಸಾರಿಗೆ ಬಗ್ಗೆ ಸರಿಯಾದ ನಿರ್ಧಾರ ಕೈಗೊಳ್ಳಬೇಕಾಗುತ್ತದೆ. ಈ ರೀತಿ ನೇಮಕಗೊಳ್ಳುವ ಮಾನವ ಸಂಪನ್ಮೂಲವು ಮುಂದೆ ಸಂಸ್ಥೆಯ ಭವಿಷ್ಯವನ್ನು ನಿರ್ಧರಿಸುವ ಪ್ರಮುಖ ಸಂಪನ್ಮೂಲ ವಾಗುತ್ತದೆ.

ಹಾಗಾಗಿ ನೇಮಕಾತಿ ಚಟುವಟಿಕೆಗಳು ಅತ್ಯಂತ ಅಚ್ಚುಕಟ್ಟಾಗಿ ಹಾಗೂ ಮುಂದಾಲೋಚನೆಯನ್ನು ಇಟ್ಟುಕೊಂಡು ಮಾಡಬೇಕಾಗುತ್ತದೆ.

ನೇಮಕಾತಿಯ ನಂತರ ಪ್ರಮುಖವಾದ ಚಟುವಟಿಕೆ ಎಂದರೆ ತರಬೇತಿ. ಸಂಸ್ಥೆಗೆ ಬೇಕಾಗಿರುವ ರೀತಿಯಲ್ಲಿ ಅವರನ್ನು ಕಾರ್ಯನಿರ್ವಹಿಸುವಂತೆ ಮಾಡುವಲ್ಲಿ ತರಬೇತಿಯು ಪ್ರಮುಖ ಪಾತ್ರವಹಿಸುತ್ತದೆ. ಸರಿಯಾದ ತರಬೇತಿ ನೀಡದಿದ್ದಲ್ಲಿ ಅವರು ಯಾವುದೇ ರೀತಿಯ ಪ್ರಯೋಜನಕ್ಕೆ ಬರುವುದಿಲ್ಲ. ಹಾಗಾಗಿ ಸಂಸ್ಥೆಯು ಮೊದಲೇ ಯೋಜನೆ ಮಾಡಿ ಯಾವ ರೀತಿ ತರಬೇತಿ ಕಾರ್ಯಕ್ರಮವನ್ನು ಮಾಡಬೇಕು ಹಾಗೂ ಅದರಿಂದ ಮಾನವ ಸಂಪನ್ಮೂಲವನ್ನು ಅಭಿವೃದ್ಧಿಪಡಿಸಬೇಕು ಎಂಬುದನ್ನು ನಿಶ್ಚಯಿಸ ಬೇಕಾಗುತ್ತದೆ.

ಪ್ರಮುಖವಾಗಿ ಉತ್ಪಾದನೆಯ ಪ್ರಕ್ರಿಯೆ ಯಾವ ರೀತಿ ನಿರ್ಧಾರವಾಗುತ್ತದೋ ಅದಕ್ಕೆ ಅನುಗುಣವಾಗಿ ಬೇಕಾಗುವ ತರಬೇತಿಯನ್ನು ಸಿದ್ಧಪಡಿಸಬೇಕಾಗುತ್ತದೆ. ಈ ತರಬೇತಿಯಲ್ಲಿ ಉತ್ಪಾದನೆಯ ಪ್ರಕ್ರಿಯೆಯ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ಕೊಡಬೇಕಾಗುತ್ತದೆ. ಉತ್ಪಾದನೆಯ ಪ್ರಕ್ರಿಯೆಯಲ್ಲಿ ಬರುವ ಪ್ರತಿಯೊಂದು ಹಂತಗಳು ಕೂಡ ಅತ್ಯಂತ ಪ್ರಮುಖ ಪಾತ್ರವಹಿಸುತ್ತದೆ. ಉತ್ಪಾದನೆಯಲ್ಲಿ ತೊಡಗುವ ಕಾರ್ಮಿಕರು ಯಾವ ಯಾವ ಹಂತದಲ್ಲಿ ಉತ್ಪಾದನೆಯಲ್ಲಿ ಪಾಲ್ಗೊಳ್ಳುವರು ಆಯಾ ಹಂತಗಳಿಗೆ ತಕ್ಕ ತರಬೇತಿ ಪಠ್ಯವನ್ನು ನಿರ್ಧರಿಸಬೇಕಾಗುತ್ತದೆ. ಸ್ವಲ್ಪ ವಿವರವಾಗಿ ಹೇಳುವುದಾದರೆ ಉತ್ಪಾದನೆಯಲ್ಲಿ ಮೊದಲು ಕಚ್ಚಾ ಪದಾರ್ಥವನ್ನು ಸಿದ್ಧಪಡಿಸಿಕೊಳ್ಳುವುದು ಸಾಮಾನ್ಯವಾಗಿ ಮೊದಲ ಹಂತವಾಗಿರುತ್ತದೆ. ಈ ಹಂತದಲ್ಲಿ ಕಾರ್ಮಿಕರು ಹೆಚ್ಚು ಗಮನಕೊಟ್ಟು ಕಚ್ಚಾ ಪದಾರ್ಥವನ್ನು ಉತ್ಪಾದನೆಗಾಗಿ ಯಾವ ರೀತಿ ಸಿದ್ಧಗೊಳಿಸಿಕೊಳ್ಳಬೇಕು ಅದೇ ರೀತಿ ಜಾಚೂತಪ್ಪದೆ ಮಾಡಬೇಕಾಗುತ್ತದೆ. ಒಂದು ವೇಳೆ ಕಾರ್ಮಿಕರು ಸರಿಯಾಗಿ ತರಬೇತಿ ಪಡೆಯದೆ ಇದ್ದಲ್ಲಿ ಇದೇ ಮೊದಲ ಹಂತದಲ್ಲಿ ಲೋಪದೋಷಗಳು ಕಂಡು ಬಂದರೆ ಮುಂದೆ ಸಿದ್ಧ ವಸ್ತು ತಯಾರಾದಾಗ ಅದು ದೋಷಪೂರಿತವಾಗಿದ್ದ ಉಪಯೋಗಕ್ಕೆ ಯೋಗ್ಯವಿರುವುದಿಲ್ಲ.

ಕೆಲವೊಂದು ವಸ್ತುಗಳ ಉತ್ಪಾದನೆಯಲ್ಲಿ ಹತ್ತಕ್ಕಿಂತಲೂ ಹೆಚ್ಚು ಹಂತಗಳು ಇರುತ್ತವೆ ಇನ್ನೂ ಕೆಲವು ವಸ್ತುಗಳು ಕೇವಲ ಎರಡು ಮೂರು ಹಂತಗಳಲ್ಲಿ ಸಿದ್ಧವಾಗಿ ಬಿಡುತ್ತವೆ. ಇಲ್ಲಿ ನಾವು ಪ್ರಮುಖವಾಗಿ ಗಮನಿಸಬೇಕಾದ ಅಂಶಗಳೆಂದರೆ ಪ್ರತಿ ಹಂತದ ಉತ್ಪಾದನೆಯಲ್ಲಿ ಪಾಲ್ಗೊಳ್ಳುವ ಕಾರ್ಮಿಕರು ಅದಕ್ಕೆ ತಕ್ಕನಾದ ತಂತ್ರಜ್ಞಾನ ಹಾಗೂ ಕೌಶಲ್ಯದ ಬಗ್ಗೆ ತರಬೇತಿಯನ್ನು ಹೊಂದಬೇಕಾಗುತ್ತದೆ.

ಈ ರೀತಿ ಕೊಡಲ್ಪಟ್ಟ ತರಬೇತಿಯು ಪರೀಕ್ಷೆಗೆ ಒಳಗಾಗಿ ಅವರು ಪಡೆದ ತರಬೇತಿ ಸಮರ್ಪಕವಾಗಿದೆ ಎಂಬುದನ್ನು ಖಾತ್ರಿಪಡಿಸಿ ಕೊಳ್ಳಬೇಕಾಗುತ್ತದೆ. ಮುಂದೆ ಅನುಭವದ ಆಧಾರದ ಮೇಲೆ ಅವರ ಕೌಶಲ್ಯದ ಮಟ್ಟವನ್ನು ಹಾಗೂ ತಂತ್ರಜ್ಞಾನದಲ್ಲಿ ಆಗುವ ಬದಲಾವಣೆಗಳಿಗೆ ಅನುಗುಣವಾಗಿ ತರಬೇತಿಯಲ್ಲಿ ಬದಲಾವಣೆಗಳನ್ನು ತರಬೇಕಾಗುತ್ತದೆ..

-o-



# ಹುಟ್ಟುಗೋಲು

-ಸುಧಾ ಜೈರಾಮ್

ಒಂದೆರಡು ತಿಂಗಳ ಹಿಂದೆ, ಒಂದು ಭಾನುವಾರ ಬೆಳಗ್ಗೆ ನಮ್ಮನೆಯವರಿಗೆ ಒಂದು ಕಪ್ ಕಾಫಿ ಕೊಟ್ಟು, ನಾನು ಸಹ ಒಂದು ಕಪ್ ನಲ್ಲಿ ಕಾಫಿ ಕುಡಿಯುತ್ತಿದ್ದೆ. ಆಗ ಅವರ ಮೊಬೈಲ್ ಇನ್ ಕಮಿಂಗ್ ಕಾಲ್ ಬಂತು. ಕಾಲ್ ರಿಸೀವ್ ಮಾಡಿ ಇವರು ಮಾತನಾಡುತ್ತ.. ಇವತ್ತ? ಎಲ್ಲಿಗೆ? ಯಾರ್ಯಾರು? ಮೇಕು ದಾಟುಗೆ ! ಅಲ್ಲಿಗಾದರೇ ಬೇಡ! ಬೇಕಾದರೆ ಮುತ್ತತ್ತಿಗೆ ಹೋಗೋಣ! ಆಯ್ತು.. ನಿಮ್ಮ ಮನೆ ಹತ್ತಿರ ಬರುತ್ತೇನೆ ಬಿಡು" ಅಂದರು. ನಾನು ಕಾಫಿ ಕುಡಿಯುತ್ತಾ... ಅವರ ಮಾತನ್ನು ಕೇಳಿಸಿಕೊಳ್ಳುತ್ತಲೇ ಇದ್ದೆ. ಜಯ್ ಫೋನ್ ಕಟ್ ಮಾಡಿ, "ಸುಧಾ.. ಫ್ರೆಂಡ್ಸ್ ಜೊತೆ ಮುತ್ತತ್ತಿಗೆ ಹೋಗ್ತಾ ಇದ್ದೆವೆ.. ಸಂಜೆ ಅಥವ ರಾತ್ರಿ ಬರ್ತೀವಿ ಅಂತ ಹೇಳಿ, ಹಲ್ಲುಜ್ಜಿ, ಮುಖ ತೊಳೆದು, ಒಂದು ಟೀ ಶರ್ಟ್, ಒಂದು ಜೀನ್ಸ್ ಪ್ಯಾಂಟ್ ಏರಿಸಿಕೊಂಡು. ಹೊರಡಲು ರೆಡಿಯಾದರು..

"ರ್ರೀ.. ಸ್ನಾನನಾದರೂ ಮಾಡಿ" ಎಂದೆ.

"ಅಲ್ಲೇ ಹೊಳೆಲಿ ಸ್ನಾನ ಮಾಡ್ತೀವಿ "

'ಚೆನ್ನಾಗಿರೋ ಬಟ್ಟೆ ಹಾಕಿಕೊಳ್ಳಿ 'ಅಂದೆ.

"ಅಯ್ಯೋ ನಮ್ಮನ್ನು ಯಾರ್ ನೋಡ್ಬೇಕು ! ಇಷ್ಟೇ. ಸಾಕು "ಅಂತ ಹೇಳಿ.. ಬೈ..ಬೈ ಹೇಳಿ ಹೊರಟೇ ಬಿಟ್ಟರು. ಇನ್ನೂ ಮನೆಯಿಂದ ಹೊರಡುವ ಸಮಯದಲ್ಲಿ ಬೇಡ ಅನ್ನುವಂತಿಲ್ಲ.. ಬೇರೆ ಪ್ರಶ್ನೆಗಳನ್ನು ಕೇಳುವಂತಿಲ್ಲ.. ಆಯ್ತು.. ಹುಷಾರಾಗಿ ಹೋಗ್ಬನ್ನಿ " ಅಂತ ಹೇಳಿದೆ.. ಅಂದು ಅವರ ಫ್ರೆಂಡ್ಸ್ ಕೇವಲ ಒಂದೆರಡು ಗಂಟೆಯಲ್ಲಿ ಒಂದು ದಿನ ದ ಪ್ರವಾಸಕ್ಕೆ ಹೊರಡಲು ಪ್ಲಾನ್ ಮಾಡಿ, ಅದನ್ನು ಕಾರ್ಯಗತಗೊಳಿಸಿದ್ದರು..

ಅದೇ ನಾವು (ಮಹಿಳೆಯರು) ಸ್ನೇಹಿತೆಯರೆಲ್ಲಾ ಹೋದ ವರ್ಷ ಗೊರವನ ಹಳ್ಳಿ ಲಕ್ಷ್ಮೀ ದೇವಸ್ಥಾನ, ಮಂದಾರಗಿರಿ ಪರ್ವತಕ್ಕೆ ಹೋಗೋಣ ಅಂತ ತೀರ್ಮಾನ ಮಾಡಿದ್ದೆವು. ಆದರೆ ನಾವು ಹೋಗಿದ್ದು ಐದಾರು ತಿಂಗಳ ಹಿಂದೆ.. ಟ್ರಿಪ್ ಎಲ್ಲಾ ಚೆನ್ನಾಗಿಯೇ ಆಯಿತು. ಅದೇ ಹುಮ್ಮಸ್ಸು ನಲ್ಲಿಯೇ ಇನ್ನು ಮುಂದೆ ನಾವು ಸಹ ಗಂಡಸರಂತೆ ಎರಡು ತಿಂಗಳಿಗೊಮ್ಮೆಯಾದರೂ ಒಂಡೇ ಟ್ರಿಪ್ ಹಾಕಿಕೊಳ್ಳೋಣಂತ ತೀರ್ಮಾನಿಸಿ ಮುಂದಿನ ಟ್ರಿಪ್ ಚನ್ನಪಟ್ಟಣದ ಗೌಡಗದ್ದೆಯಲ್ಲಿರುವ ಚಾಮುಂಡೇಶ್ವರಿ ದೇವಸ್ಥಾನ, ಅಲ್ಲಿಂದ ತಲಕಾಡಿಗೆ ಹೋಗಿ ಬರೋಣವೆಂದು ತೀರ್ಮಾನಿಸಿದೆವು. ಆದರೆ ಐದಾರು ತಿಂಗಳಾದರೂ ಅದನ್ನು ಕಾರ್ಯಗತ ಮಾಡಲು ಸಾಧ್ಯವಾಗಿಲ್ಲ.. ಮಹಿಳೆಯರಿಗೆ ಹತ್ತಾರು ಸಮಸ್ಯೆಗಳು. ಮೊದಲಿಗೆ ಅಡ್ಡ ಬರುವುದೇ ಈ ಗಂಡಸರನ್ನ ಒಪ್ಪಿಸುವುದು. ಹಾಗು ಹೀಗೋ ಅವರನ್ನ ಒಪ್ಪಿಸಿದರೆ.. ನಂತರ ಕಾಡುವುದು ಮಹಿಳೆಯರ 'ತಿಂಗಳ ಸಮಸ್ಯೆ', ಒಬ್ಬೊಬ್ಬರದು ಒಂದೊಂದು ವಾರ, ದಿನ, ಅದನ್ನು ನಿಭಾಯಿಸಿದರೆ, ಆನಂತರ ಅಡ್ಡ ಬರುವುದು ಮಕ್ಕಳು ಪರೀಕ್ಷೆ (ಟೆಸ್ಟ್), ಒಬ್ಬೊಬ್ಬರು ಒಂದೊಂದು ಸ್ಕೂಲ್ , ಸ್ಟೇಟ್, ಸಿಬಿಎಸ್ ಸಿ ಐಸಿಎಸ್ಇಸಿ ಸಿಲಬಸ್, ಒಂದು ಸಲ "ಅಯ್ಯೋ. ನಮ್ಮತ್ತೆ ಮಾವನಿಗೆ ಹುಷಾರಿಲ್ಲ.. ಟ್ರಿಪ್ ಗೆ.ಬಂದರೆ ಮುನಿಸಿಕೊಳ್ಳುತ್ತಾರೆ." ಅಂತ ಒಬ್ಬಳು. ಇನ್ನೊಂದು ಸಲ "ಥೂ.. ನನ್ನ ನಾದಿನಿ ಮಕ್ಕಳೊಂದಿಗೆ ತವರು ಮನೆಗೆ ಈಗಲೇ ಬರಬೇಕಾ" ಅಂತ ಮತ್ತೊಬ್ಬಳು. "ಗಂಡನಿಗೆ ಹುಷಾರಿಲ್ಲ" ಅಂತ ಮಗದೊಬ್ಬಳು, "ಗಂಡನಿಗೆ ಈ ತಿಂಗಳು ಫೈನಾನ್ಸ್ ಪ್ರಾಬ್ಲಂ ಅಂತೆ, ಮುಂದಿನ ತಿಂಗಳು ಹೋಗು" ಅಂದರು ಅಂತ ಇನ್ನೊಬ್ಬಳು.

ಒಂದು ವಾರ ಎಲ್ಲರೂ ಸಿದ್ಧ ಆದೆವು. ಹೊರಡುವ ಹಿಂದಿನ ದಿನವೇ ನಮ್ಮಪ್ಪ ಹುಷಾರ್ ತಪ್ಪಿದರು. "ನಾನು ಬರಲ್ಲ.. ನೀವು ಹೋಗಿಬನ್ನಿ ಅಂತ ನಾನು ಹೇಳಿದರು.. ನನ್ನ ಗೆಳತಿಯರು ಟ್ರಿಪ್ ಕ್ಯಾನ್ಸಲ್ ಮಾಡಿದರು. ಆನಂತರ ಸಾಲು ಸಾಲು ಹಬ್ಬಗಳು, ಸಹ ನಮಗೆ ಸಮಸ್ಯೆಯೇ.. ಹಬ್ಬದ ದಿನ ಹೊರಟರೆ ಹಬ್ಬ ಮಾಡೋದು ಬಿಟ್ಟು ಊರು ಸುತ್ತೋಕೆ ಹೋಗಿದ್ದಾಳೆ ಅಂತ ಗಂಡನ ಮನೆ ಕಡೆಯಿಂದ ಅನಿಸಿಕೊಳ್ಳಬೇಕು.. ಹೀಗೆಯೇ ಸಮಸ್ಯೆ ಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತಿದೆ. ನಮ್ಮ ಟ್ರಿಪ್ ಮುಂದಕ್ಕೆ ಹೋಗುತ್ತಲೇ ಇದೆ. ಗಂಡಸರು ಕೇವಲ ಒಂದೆರಡು ಗಂಟೆಯಲ್ಲಿ ಒನ್ ಡೇ ಟ್ರಿಪ್ ಪ್ಲಾನ್ ಮಾಡಿ ಹೋಗಿಬರ್ತಾರೆ.. ಆದರೆ ಮಹಿಳೆಯರಿಗೆ ನೋಡಿ ಎಷ್ಟು ಕಷ್ಟವಾಗುತ್ತದೆ. ನಿಮಗೂ ಇಂತಹ ಅನುಭವ ಆಗಿರುತ್ತದೆ ಎಂದು ನಂಬಿದ್ದೇನೆ. ಮಹಿಳೆಯರು ಅವಕಾಶ ವಂಚಿತರು ಎಂಬುದು ಮತ್ತೆ ಮತ್ತೆ ಸಾಬೀತು ಆಗುತ್ತಿದೆ. ಆದರೆ, ಇದರಿಂದ ಒಂದಂತು ಸತ್ಯ? ಸಂಸಾರ ದೋಣಿ ಸಾಗಿಸಲು ಗಂಡಸರಿಗಿಂತ ಹೆಂಗಸರೇ ಹೆಚ್ಚು ಹುಟ್ಟು ಗೋಲು ಹಾಕಬೇಕು ಅನ್ನೋದು ೧೦೦% ನಿಜ! ಏನಂತ್ತೀರಾ?

-o-

# ಪ್ರಸನ್ನ ಗಣಪತಿ ಹೊಳಲ್ಕೆರೆ.

-ಉಮೇಶ್ ಬಿ ಪಿ.

ಅದು ೧೬೭೫ರ ಚಿತ್ರದುರ್ಗ ಪಾಳೇಗಾರರ ಆಳ್ವಿಕೆಯ ಕಾಲ. ಅಂದಿನ ಪಾಳೇಗಾರರು ನಿರ್ಮಾಣ ಮಾಡಿದ ಗಣೇಶ ದೇವಸ್ಥಾನ ಕೋಟೆನಾಡು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಪಟ್ಟಣದಲ್ಲಿರುವ ಪ್ರಸನ್ನ ಮಹಾಗಣಪತಿ.

ಇದನ್ನು ಮೊದಲು ಬಯಲಿನಲ್ಲಿ ಸ್ಥಾಪಿಸಲಾಗಿದ್ದರಿಂದ ಇದನ್ನು 'ಬಯಲು ಗಣಪ' ಎಂದು ಸಹ ಕರೆಯಲಾಗುತ್ತಿತ್ತು. ಇದೀಗ 'ಪ್ರಸನ್ನ ಮಹಾಗಣಪತಿ' ಎಂದು ಪ್ರಸಿದ್ಧಿಯಾಗಿದೆ. ವಿಘ್ನ ವಿನಾಯಕನ ದರ್ಶನ ಪಡೆಯಲು ಹೊರ ಜಿಲ್ಲೆ ಮತ್ತು ರಾಜ್ಯಗಳಿಂದಲೂ ಬರುವವರ ಸಂಖ್ಯೆ ಹೆಚ್ಚಾಗಿದೆ.



೧೬೭೫ರಲ್ಲಿ ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ಪಟ್ಟಣದಲ್ಲಿ ಪಾಳೇಗಾರರಿಂದ ಸುಮಾರು ೨೦ ಅಡಿ ಎತ್ತರದಲ್ಲಿ ನಿರ್ಮಿತವಾದ ಬಯಲು ಗಣಪತಿಯನ್ನು ಗುಲ್ಕಪ್ಪನಾಯಕ ಎಂಬುವನು ಪ್ರತಿಷ್ಠಾಪಿಸಿದ್ದಾನೆ ಎಂದು ಹೇಳಲಾಗುತ್ತಿದೆ.

ಬಯಲು ಗಣಪನಿಗೆ ಈಗ ದೇವಸ್ಥಾನವನ್ನು ನಿರ್ಮಿಸಿದ್ದಾರೆ. ಈ ವಿಘ್ನೇಶ್ವರನು ಭಕ್ತರ ಕಷ್ಟಗಳನ್ನು ಪರಿಹರಿಸುತ್ತಾ ಪ್ರಸಿದ್ಧಿಯನ್ನು ಪಡೆದಿದ್ದಾನೆ. ಗಣಪತಿಗೆ ಜಡೆಯಿರುವುದರಿಂದ ಜಡೆ ಗಣಪ ಎಂದೂ ಕರೆಯುತ್ತಾರೆ. ಈ ಜಡೆಯನ್ನು ಪಾರ್ವತಿಯ ಜಡೆ ಎಂದು ಹೇಳಲಾಗುತ್ತದೆ. ಈ ಜಡೆಗೆ ಹಬ್ಬ ಹರಿದಿನಗಳಲ್ಲಿ ಮಹಿಳೆಯರು, ಯುವತಿಯರು ಹರಕೆ ಹೊತ್ತು ಬೆಣ್ಣೆಯನ್ನು ಹಚ್ಚಿ ಪೂಜಿಸುತ್ತಾರೆ. ಇದರಿಂದ ಕೂದಲು ದಟ್ಟವಾಗಿ ಆರೋಗ್ಯವಾಗಿ ಬೆಳೆಯುತ್ತವೆ ಎಂಬ ನಂಬಿಕೆಯೂ ಇದೆ. ಭಕ್ತರು ತನ್ನ ಬಳಿ ಏನೇ ಕಷ್ಟಗಳನ್ನು ತಂದು ಬಗೆಹರಿಸುವಂತೆ ಪ್ರಾರ್ಥಿಸಿಕೊಂಡರೆ ಅವುಗಳನ್ನು ಸುಲಭವಾಗಿ ಪರಿಹರಿಸುತ್ತಾನೆ ಎಂಬ ನಂಬಿಕೆಯಿದೆ. ಇದರ ಜೊತೆಗೆ ಊರಿಗೆ ಬರಗಾಲ ಬಂತೆಂದರೆ ಇಲ್ಲಿನ ಗಣಪನಿಗೆ ನೀರಿನ ಅಭಿಷೇಕ ಮಾಡಿದರೆ ಮಳೆ ಬರುತ್ತದೆ ಎಂಬ ನಂಬಿಕೆಯೂ ಈ ಭಾಗದ ಜನರಲ್ಲಿದೆ..

ಭಕ್ತರು ವಿನಾಯಕನ ಮುಂದೆ ಅನೇಕ ಹರಕೆಗಳನ್ನು ಹೊತ್ತು ತಂದು ಮಕ್ಕಳ ಭಾಗ್ಯ, ಕಂಕಣ ಭಾಗ್ಯ, ಸರ್ಕಾರಿ





ಕೆಲಸ, ಇತರೆ ಕಷ್ಟ ಸುಖವನ್ನು ಹರಕೆಗಳ ಮೂಲಕ ಬೇಡಿಕೊಳ್ಳುತ್ತಾರೆ. ಭಕ್ತರ ಕೋರಿಕೆಯನ್ನು ಈಡೇರಿಸುವ ಈ ಗಣಪತಿ ಇಂದು ಪ್ರಸನ್ನ ಮಹಾಗಣಪತಿ ಎಂದು ಕರೆಯಿಸಿಕೊಳ್ಳುತ್ತಿದ್ದಾನೆ.

ಸಂಕಷ್ಟಿಯ ದಿನದಂದು ವಿವಿಧ ಅಲಂಕಾರಗಳೊಂದಿಗೆ ವಿಶಿಷ್ಟವಾಗಿ ಪೂಜೆಯನ್ನು ನೇರವೇರಿಸಲಾಗುತ್ತದೆ. ಹೊಳಲ್ಕೆರೆಯಷ್ಟೆ ಅಲ್ಲ ಹೊರ ರಾಜ್ಯಗಳಿಂದಲೂ ಇಲ್ಲಿಗೆ ಬಂದು ಪೂಜೆ ಮಾಡಿ ಹೋಗುವುದು ವಿಶೇಷವಾಗಿದೆ.

ವಿವಾಹವಾದ ಜೋಡಿಗಳು ಈತನ ಸನ್ನಿಧಿಯಲ್ಲಿ ಚಿತ್ರದುರ್ಗ ಜಿಲ್ಲೆಯಿಂದಷ್ಟೆ ಅಲ್ಲದೆ ಹೊರ ರಾಜ್ಯಗಳಿಂದಲೂ ವರ್ಷಕ್ಕೊಮ್ಮೆ ಬಂದು ತಮ್ಮ ಕೈಯಲ್ಲಾದ ಸೇವೆಯನ್ನು ಮಾಡುತ್ತಾರೆ.

ಇನ್ನು ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ತಮಗೆ ಉತ್ತಮ ಫಲಿತಾಂಶ ನೀಡುವಂತೆ ಬೇಡಿಕೊಂಡು ಅದೂ ಕೂಡ ಈಡೇರಿರುವ ಸಂಗತಿಗಳಿವೆ ಎನ್ನಬಹುದು. ಈ ವಿನಾಯಕನ ಮಂದಿರದಲ್ಲಿ ಅನೇಕ ಜೋಡಿಗಳು ಸಪ್ತಪದಿ ತುಳಿದಿದ್ದಾರೆ. ಅದರಲ್ಲೂ ವಿಶೇಷವಾಗಿ ಅದೆಷ್ಟೋ ಪ್ರೀತಿಸಿದ ಜೋಡಿಗಳು ಈತನ ಸನ್ನಿಧಿಯಲ್ಲಿ ವಿವಾಹ ಆಗಿದ್ದಾರೆ. ಈ ದೇವಸ್ಥಾನ ಪುಣ್ಯ ಕ್ಷೇತ್ರವಾಗಿ ಹೆಸರು ಪಡೆದುಕೊಂಡಿದೆ. ಒಟ್ಟಿನಲ್ಲಿ ಭಕ್ತರು ಬೇಡಿಕೊಳ್ಳುವ ವರವನ್ನು ಇಲ್ಲ ಎನ್ನದೆ ಈಡೇರಿಸುತ್ತಾ ಎಲ್ಲರನ್ನು ಸಂರಕ್ಷಿಸುತ್ತಾ ಇರುವ ಗಣಪ ಇಂದು ಶಕ್ತಿಶಾಲಿ ಹಾಗೂ ಪ್ರಸನ್ನ ಮಹಾಗಣಪ ಎಂದು ಖ್ಯಾತಿಯನ್ನು ಪಡೆದಿದ್ದಾನೆ.

ಚಿತ್ರದುರ್ಗದಿಂದ ಶಿವಮೊಗ್ಗ ಹೋಗುವ ದಾರಿಯಲ್ಲಿ ಹೊಳಲ್ಕೆರೆ ಸಿಗಲಿದೆ. ಈ ಬಯಲು ಗಣೇಶನನ್ನು ಯಾರು ಶ್ರದ್ಧಾ, ಭಕ್ತಿಯಿಂದ ಈ ಗಣೇಶನನ್ನು ಪ್ರಾರ್ಥಿಸುತ್ತಾರೋ, ಪೂಜಿಸುತ್ತಾರೋ ಅವರ ಮನೋಕಾಮನೆಗಳು ಈಡೇರುತ್ತವೆ ಎನ್ನಲಾಗುತ್ತಿದೆ.

-o-

# ಕುರುಡು ಕಾಂಚಾಣ

-ಪ್ರಭುರಾಜ ಹೂಗಾರ್

ದುರಂತ ಅನ್ನೋದು ಒಂದೇ ಆದರೂ ಅದು ಸಂಭವಿಸಲು ಬೇಕಿರುವ ಪರಿಸ್ಥಿತಿಗಳು ಅಥವಾ ಸ್ಥಿತಿಗತಿಗಳು ಇನ್ನೂ ದುರಂತಮಯವಾಗಿರುತ್ತವೆ. ಕಾಂಚಣದ ಬಗ್ಗೆಯೇ ಮಾತನಾಡಲಿಕ್ಕಿರೋದು, ಮೊದಲೇ ಹೆಸರು ಕಾಂಚಾಣ, ಚಂಚಲತೆಗೆ ಇನ್ನೊಂದು ಹೆಸರೇ ಕಾಂಚಾಣ ಅಂದರೂ ತಪ್ಪಾಗಲಿಕ್ಕಿಲ್ಲವೇನೊ, "ಹೇ ಸ್ಪರ್ಧೆಯಲ್ಲಿ ನಾವೂ ಇದ್ದೀವಿ" ಅಂತ ಬೇಜಾರಾಗಬೇಡಿ. ಹಾಗೆಯೇ ಕೋಪನೂ ಮಾಡಿಕೊಳ್ಳಬೇಡಿ, ಈ ವಿಷಯದಲ್ಲಿ ಹೊಗಳಿದರೂ ಹಾಗೆಯೇ ಕೇಳಿಸುತ್ತದೆ; ತಮಾಷೆಗೆ ಹೇಳಿದ್ದು. "ಸೆರಗು ತೀಡಿದಷ್ಟು ಸುಕ್ಕು, ಹಟ ಮಾಡುವ ಕೂದಲು, ನೀರಿ ಏಕೋ ಸರಿಯಾಗದು....., ಬರಿ ಹಸಿರು ಬರಿ ಹೂವು, ಎದೆಯಲೆಷ್ಟೋ ಹೆಸರು, ಯಾವ ಮದುವೆ ದಿಬ್ಬಣವೊ, ಸುಮ್ಮನೆ ನಿಟ್ಟುಸಿರು...." ಇದು ನಾ ಹೇಳಿದ್ದಲ್ಲ, ಎಚ್ಚೆಸ್ವಿ ಅವರು ತುಂಬಾ ಸೊಗಸಾಗಿ ಹೇಳಿದ್ದಾರೆ. ವಯಸ್ಸು ಹದಿನಾರೆ ಇರಬೇಕೆಂದಿಲ್ಲ, ನಾ ಹೇಳಬೇಕು ಅನ್ಕೊಂಡಿದ್ದು ಚಂಚಲತೆಗಷ್ಟೇ ಅಲ್ಲ ಸ್ಥಿರತೆಯ ಉಲ್ಲೇಖವೂ "ಅವಳೇ" ಎಂದು, ಕಂಡವರ ಮನೆಯ ಕೂಸಿನ ಅಳುವಿಗೂ ಕರುಳು ಚುರ್ ಎಂದು ಪರಿತಪಿಸುವ ಜೀವ/ಜೀವಿ ಅವಳು, ಅಂದ್ರೆ ಕರುಣೆ, ಕಾಳಜಿ, ಕನಿಕರದಿಂದ ಕೂಡಿರುವ, ಯಾರದ್ದೆ ನೋವಿಗೂ ಸ್ಪಂದಿಸುವಂತಹ ವ್ಯಕ್ತಿತ್ವದವಳು.

ಹಾಗೆಯೆ ಕಾಂಚಾಣವೂ ಅಷ್ಟೇ, ನೀವಲ್ಲಿ ಚಂಚಲತೆಗೆ ಸ್ಪರ್ಧೆ ನೀಡುತ್ತೀರಲ್ಲ ಅಂತ ಹೇಳಿ ಇಲ್ಲೂ ಪ್ರತಿಸ್ಪರ್ಧಿಯಾಗಿದೆ, ಯಾರ ಕೈಯಲ್ಲಿದ್ದರೂ, ಯಾವ ಸ್ಥಳದಲ್ಲಿದ್ದರೂ ಬೆಲೆ ಕಳೆದುಕೊಳ್ಳದೆ ಸ್ಥಿರತೆ ಕಾಪಾಡಿಕೊಳ್ಳುತ್ತದೆ. ಸಂದರ್ಭಾನುಸಾರ ನಿರ್ದಿಷ್ಟ ಬೆಲೆಗಿಂತ ತುಸು ಹೆಚ್ಚೇ ತೂಗುತ್ತದೆ ಹೊರತು ಕಡಿಮೆಯಾಗುವುದಿಲ್ಲ. ದುರಂತದ ಬಗ್ಗೆ ಹೇಳ್ತಾ ಹೇಳ್ತಾ ಎಲ್ಲೆಲ್ಲಿಗೊ ಕರೆದೊಯ್ಯಿತು, "ಓಯ್, ಕಣ್ ಕಾಣ್ಸೋದಿಲ್ವಾ! ಮೈಮೇಲೆ ಬರ್ತಿಯಲ್ಲ..." ಅಂತ ಯಾರಿಗಾದರೂ ಬೈದಿರ್ತೀರಾ ಅಲ್ವಾ, ಅದು ವಾಹನಗಳ ವಿಚಾರದಲ್ಲಂತೂ ಅಪಘಾತಗಳನ್ನೆ ತಂದೊಡ್ಡುತ್ತದೆ. "ಕುರುಡು" ಅಂತಿದೆಯಲ್ಲ, ಕಾಣಿಸುವುದಿಲ್ಲ ಅಂದಾಗಲೇ ಅಲ್ವೆ ದುರಂತಗಳು ಸಂಭವಿಸೋದು. ಅದರಲ್ಲೂ ಸದಾ ಚಂಚಲೆ "ಕಾಂಚಾಣ" ಕುರುಡಾಗಿದ್ರೆ!!?? ಅದೆಂತಹ ಅನಾಹುತ, ದುರಂತಗಳು ಸಂಭವಿಸಬಹುದೆಂದು ಊಹಿಸಬಹುದು. ಒಮ್ಮೊಮ್ಮೆ ಊಹೆಗೂ ಮೀರಿದ ಸಂಭವನೀಯತೆ ಇರುತ್ತದೆ. ಕರೋನಾ ತರುವ ಸಾವಿನ ದುರಂತಕ್ಕಿಂತ ಬರುವುದೆನ್ನುವ ಭಯ ತರುವ ಸಾವಿದೆಯಲ್ಲ ಅಂತಹ ದುರಂತದ ಬಗ್ಗೆ ಹೇಳಿದ್ದು, ಇಲ್ಲಿ ಕಾಂಚಾಣ ಇಲ್ಲದೆ ಸತ್ತವರಿಗಿಂತ ಕಾಂಚಾಣ ಇಲ್ವಲ್ಲ ಅಂತ್ಹೇಳಿ ಸತ್ತವರೆ/ಸಾಯುವವರೆ ಹೆಚ್ಚು. ದುರಂತ ತರುವ ದುರಂತಕ್ಕಿಂತ, ದುರಂತ ತರುವ ಸನ್ನಿವೇಶಗಳೇ ಇನ್ನೂ ದುರಂತಮಯ ಅಂತ ಹೇಳಿದ್ದು. ವಾಕರಿಕೆ ಬಂದು ಹೋಗಿರಬೇಕಲ್ಲ "ದುರಂತ" ಪದ ಕೇಳಿ ಕೇಳಿ, ಅಲ್ಲಲ್ಲ ಓದಿ ಓದಿ. ಕಾಂಚಾಣ ನಿಜವಾಗಿಯೂ ಕುರುಡಾ!? ಯಾವ ವೈದ್ಯರೂ ಸಹ ಈ ಕುರುಡುತನವನ್ನೇಕೆ ನಿವಾರಿಸುವ ಬಗ್ಗೆ ಕ್ರಮ ಕೈಗೊಂಡಿಲ್ಲ!? ಅಥವಾ ನಿವಾರಿಸಲಾಗದ ಕುರುಡುತನವಾ!? ಈ ಕಾಂಚಾಣ ಅನ್ನುವುದು ಹುಟ್ಟು ಕುರುಡು ಜೀವಿಯಾ!? "ನೀವೇನು ನಾಮಕರಣಕ್ಕೆ ಹೋಗಿದ್ರಾ!? ಜೀವಿ ಅಂತ ಬೇರೆ ಹೇಳ್ತಾ ಇದೀರಾ...", ಅಂತ ಕೇಳಿದ್ರೆ! ಹೌದು, ಕಾಂಚಾಣದ ಜನ್ಮ ದಿನಾಂಕ ನಿಖರವಾಗಿ ಗೊತ್ತಿಲ್ಲ, ಆದರೆ ನೀವು "ಕುರುಡು ಕಾಂಚಾಣ" ಅಂತ ಹೇಳ್ತಿದೀರಾ ಅಂದ್ರೆ ಕಣ್ಣಿತ್ತು, ಕಾಣ್ತಿತ್ತು (ಇದ್ದಿದ್ರೆ) ಅಂತಾನೆ ಅರ್ಥ ಅಲ್ವಾ! ಕಣ್ಣಿದೆ ಅಂದ್ಮೇಲೆ ಜೀವಾನು ಇರಬೇಕಲ್ಲ, ಜೀವಿನೂ ಆಗಿರಬಹುದಲ್ಲ! ಹಿಂದೊಮ್ಮೆ ನೀವೆಲ್ಲ ಕವಿಗಳು, ಸಾಹಿತಿಗಳು, ಕವನ ಬರೆಯುವವರು ಅಸಂಬದ್ಧ, ಅತಾರ್ಕಿಕ ವರ್ಣನೆ ಕೊಡ್ತೀರಾ, ಬರೀ ಉತ್ಪ್ರೇಕ್ಷೆ ಅನ್ನುವಂತಹ ತಕರಾರುಗಳನ್ನು ಕೇಳಿರುವುದು ನಿಮಗೆ ನೆನಪಿದೆ ಅಂತ ಭಾವಿಸುತ್ತೇನೆ. ಇದಕ್ಕೆ "ಅವಳು" ಹೊರತಾಗಿಲ್ಲ. ರವಿ ಕಾಣದ್ದನ್ನು ಕವಿ ಕಂಡ ಅನ್ನೋದನ್ನಂತು ಕೇಳಿಯೇ ಇರುತ್ತೀರಿ. ಹಾಗೆಯೆ ಇದು ಕೂಡ, ಆದರೂ ತಾರ್ಕಿಕವಾಗಿಯೂ ನೋಡುವ ಅಂತ ಹೇಳಿ ಇಷ್ಟೊಂದು ಮಂದಗತಿ, ದಯವಿಟ್ಟು ಸ್ವಲ್ಪ ಅನುಸರಿಸಿಕೊಂಡು ಓದಿ... "ಸರಿ ಅದೇನು ಹೇಳ್ಬೇಕೊ ಬೇಗ ಹೇಳಿ ಮುಗಿಸಿ" ಅಂತ ಬೈಕೊಳ್ಬೇಡಿ...

ಇತಿಹಾಸದಲ್ಲಿ ಚರ್ಮದ ಕಾಂಚಾಣ ಜಾರಿಗೆ ತಂದವರ ಬಗ್ಗೆ ಓದಿದ್ದೇವೆ, ಮಣ್ಣಿನಲ್ಲಿ ಎಲ್ಲವೂ ಮಣ್ಣಾಗುತ್ತದೆ ಅಂತ ಗೊತ್ತಿದ್ದರೂ ಮಣ್ಣಿನದೇ ಕಾಂಚಾಣ ಬಳಸಿದ್ದು ಕೇಳಿದ್ದೇವೆ, ಹಾಗಾದ್ರೆ

ಕಾಂಚಾಣ ಹುಟ್ಟಿದ್ದು ಯಾವಾಗ!? ಗೊತ್ತಿಲ್ಲ, ಸುಮ್ಮನೆ ಒಂದು ಯೋಚನೆಯಷ್ಟೇ, ಸಮುದ್ರಮಂಥನದ

ಸಂದರ್ಭದಲ್ಲಿ ಭಾಗ್ಯದೇವತೆ ಲಕ್ಷ್ಮೀ ಬರುವುದು, ಇನ್ನುಳಿದಂತೆ ಸಾರಾಂಶ ನಿಮಗೆ ಗೊತ್ತೇ ಇದೆ. ಆಗ ಲಕ್ಷ್ಮೀ ದೇವಿಯ ಅಭಯಹಸ್ತದ ಜೊತೆಗೆ ಕಾಂಚಾಣ ಸೃ(ವೃ)ಷ್ಟಿಯೂ ಆಗುತ್ತದೆ, ಈ ಕಾಂಚಾಣಕ್ಕೆ ಕಣ್ಣು ಕಾಣಿಸುತ್ತಿದ್ದಿದ್ದರೆ ನೇರವಾಗಿ ಕುಂಭದೊಳಗೆ ಅಥವಾ ತಟ್ಟೆಯೊಳಗೆ ಬೀಳುತ್ತಿತ್ತು, ಆದರೆ ಅದು ಹುಟ್ಟಾ ಕುರುಡು ಆಚೀಚೆನೆ ಬೀಳ್ತಾ ಇರುತ್ತೆ. "ಇದೇನ್ರಿ, ಅದೇನೊ ಹೇಳ್ತೀನಿ ಅಂತ ಟೈಂ ವೇಸ್ಟ್ ಮಾಡ್ಲಿದ್ರಲ್ಲ" ಅಂತ ಅನ್ನಿಸ್ತಾ ಇದೆಯೊ! ಸಾವಿರ ಹೂ ತಡಕಾಡಿದಾಗ ಒಂದು ಹನಿ ಜೇನು ಸಿಗುತ್ತದಂತೆ, ಎರಡೆ ಸಾಲಿನಲ್ಲಿ ಸಕ್ಕರೆಯ ಸವಿಯಂತೆ "ಕುರುಡಾಗಿರುವುದು ಕಾಂಚಾಣವಾ, ಕುರುಡಾಗಿಸುವುದು ಕಾಂಚಾಣವಾ, ಕುರುಡರಾಗಿದ್ದು ನಾವು ದೂರುತ್ತಿರುವುದು ಕಾಂಚಾಣವನ್ನಾ!?" ಅಂತ ಹೇಳಿಬಿಡಬಹುದು, ಆದರೆ ಜೇನ ಹನಿಯ ಸವಿಯು ತಾಳ್ಮೆಯಲ್ಲಿ, ನಿರಂತರತೆಯಲ್ಲಿ ಸಿಗುವಂತೆ "ಕುರುಡು ಕಾಂಚಾಣ"ವನ್ನು ನೋಡುವ ಕಾಯಕವಷ್ಟೇ ಇಲ್ಲಿಯವರೆಗೆ ಕರೆತಂದದ್ದು. ಈಗ ನೋಡೋಣ ಕುರುಡು ಕಾಂಚಾಣವನ್ನ.... "ಅಯ್ಯಪ್ಪ, ಸಾಕು, ಇನ್ನೂ ಬ(ಕೊ)ರೆದರೆ ಜೇನ ಕುಟುಕಿದಂತಾಗುತ್ತದೆ, ಸಾಕು ಸಾಕು" ಅಂತೀರಾ... ತೊಂದರೆ ಇಲ್ಲ, ಜೇನುಗೂಡಿಗೆ ಕೈಹಾಕುವುದು ಸುಲಭವೇನಲ್ಲ, ಅಲ್ವಾ...!(ವಿಷಯದ ಬಗ್ಗೆ ಹೇಳಿದ್ದು).

"ಕಾಂಚಾಣವನ್ನು ಅದೂ ಕುರುಡು ಕಾಂಚಾಣವನ್ನ ಎಲ್ಲರೂ ಶಪಿಸುತ್ತಾ ಇದ್ರೆ, ನೀವೇನ್ರೀ ಹಾಡಿ ಹೊಗಳ್ತಾ ಇದ್ದೀರಲ್ಲ" ಅಂದ್ರೆ ಹೌದು, ಕಣ್ಣಿಲ್ಲದವರು ಯಾರಾದರೂ ನಮಗೆ ಡಿಕ್ಕಿ ಹೊಡೆದರೆ ತಪ್ಪು ಯಾರದ್ದಾಗುತ್ತದೆ. "ಕುರುಡು ಕಾಂಚಾಣ" ಅಂತ ಕೇಳಿದ್ದು ಬೇಂದ್ರೆ ಅಜ್ಜಾರ ನಾದಲೀಲೆ ಕವನಸಂಕಲನದಲ್ಲಿ, ಅದೆಷ್ಟು ಓದಿದ್ದೀರಾ ಅಂತ ಕೇಳಿದ್ರೆ, ಕವನ ಅಷ್ಟೇ ಗೊತ್ತು, ಆವಾಗೆಲ್ಲ ಟ.ವಿ ಯಲ್ಲಿ ಈ ಹಾಡು ದೃಶ್ಯಕಾವ್ಯವಾಗಿ ನೋಡಿದ ನೆನಪು. ಇತ್ತೀಚೆಗೆ ಬರವಣಿಗೆಯಿಂದಾಗಿ ಅಲ್ಲಲ್ಲಿ ಓದಿದ ಬರಹಗಳಲ್ಲಿ ಅರ್ಥೈಸಿಕೊಂಡಂತೆ ಹೇಳುತ್ತಿರುವುದಷ್ಟೆ. ಇರುವ ಅಲ್ಪಸ್ವಲ್ಪ ಅರಿವಿನಲ್ಲಿ ಬೇಂದ್ರೆ ಅಜ್ಜಾರ ನಿಲುವನ್ನು ತಲುಪಿದವರನ್ನು ನಾ ಕಂಡಿಲ್ಲ. ಬರಿಯ ಪದಗಳ ಅರ್ಥ ಹೇಳಿ ವಿವರಣೆ ಕೊಟ್ಟಿರುವುದನ್ನೊ ಅಥವಾ ಸಾರಾಂಶವೆಂದು

ಯಥಾವತ್ತಾಗಿ ಸನ್ನಿವೇಶಗಳನ್ನು ನಿರೂಪಿಸಿರುವದನ್ನು ಕಂಡಿದ್ದೇನಷ್ಟೆ. ಹಾಗಾದರೆ ಇನ್ನೇನು ಮಾಡಬೇಕಾಗಿತ್ತು ಅಂದ್ರೆ, ಗೊತ್ತಿಲ್ಲ, ಅವರಂತೂ ಯಥಾವತ್ ಚಿತ್ರಿಸುವ ಕಲೆಗಾರರಾಗಿ ನನಗಂತೂ ಕಂಡಿಲ್ಲ, ಅವರೊಬ್ಬ ಮಾಂತ್ರಿಕ. ಓದಿ ಆಸ್ವಾದಿಸಬೇಕಷ್ಟೆ, ನಿಲುವು ನಿಲುಕದ ಮಾತು. ಸಮೀಪಕ್ಕಾದರೂ.... ಅಂದ್ರೆ, "ಕುರುಡು ಕಾಂಚಾಣ"ದಲ್ಲಿ ಕುರುಡುತನದ ಆಳ ಅಗಲ ಎತ್ತರಗಳನ್ನು ಕಾಂಚಾಣದ ಚಂಚಲತೆ, ಸ್ಥಿರತೆ, ಸಾರ್ವಭೌಮತ್ವದಲ್ಲಿ ಸಮ್ಮಿಳಿಸುವುದಾಗಿ ನೋಡುತ್ತಿದ್ದೇನೆ. ಮತ್ತದೆ ತರ್ಕಕ್ಕೆ ನಿಲುಕದ್ದು ಎನ್ನುವಂತಾಗುತ್ತದೆ. ಇರಲಿ, ಹಾಗೆ ಊಹಿಸಿಕೊಳ್ಳಿ ಜಾತ್ರೆಗೊ ಯಾತ್ರೆಗೊ ಹೋಗಿರುತ್ತೀರಿ ಎದುರಿಗೆ ಸಂಬಂಧಿಕರೊ ಎದುರುಮನೆಯವರೊ ಇದ್ದರೂ ಕಾಣಿಸದೆ ಅಲ್ಲಿರುವ ಜನಸ್ತೋಮ ಅಥವಾ ಜಗಮಗಿಸುವ ಗದ್ದಲದಲ್ಲಿ ಮಂತ್ರಮುಗ್ಧರಾಗಿ ಪರವಶರಾದಂತಿರಲು ಅವರು ನಿಮ್ಮನ್ನು ಕೇಳೋದಿಲ್ವಾ ಇದು ಕುರುಡುತನವಾ ಜಾಣಕುರುಡಾ ಅದ್ಹೇಗೆ ಕಾಣಿಸುವುದಿಲ್ಲ ಅಂತ. ಈಗಲೂ ಕಾಂಚಣದ ಪರವಾದ ಮಾತುಗಳಿವು, ಪಾಪ ಕಾಂಚಾಣಕ್ಕೆ ಕುರುಡು ಅಂತ್ಹೇಳಿ ಬೇಡರ ಕಣ್ಣಪ್ಪನ ಹಾಗೆ ನಾವ್ಯಾರಾದರು ಕಣ್ಣು ಕಿತ್ತು ಕೊಡಲು ತಯಾರಿದ್ದೇವಾ!? ಅಯ್ಯೋ ಖಖಖ, ಅದ್ಹೇಗೆ ಸಾಧ್ಯ!? ಅಂದ್ರೆ ಕಣ್ಣಲ್ಲ ಹೇಳಿದ್ದು, ಇರುವ ಬ್ಯಾಂಕ್ ಬ್ಯಾಲೆನ್ಸ್ ಅಥವಾ ಆಸ್ತಿ ಪಾಸ್ತಿ ಎಲ್ಲವನ್ನೂ ನಿಜವಾಗಿಯೂ ಕಣ್ಣಿಲ್ಲದವರಿಗೊ, ಇನ್ನಾರಿಗೊ ಕೊಟ್ಟರೆ ಆಗುತ್ತದಲ್ಲ ಅಂತ. ಈಗ ನಿಜವಾಗಿಯೂ ಕಣ್ಣು ಮಂಜು ಮಂಜಾಗುತ್ತಿವೆಯಲ್ಲ. ಕಾಸಿದ್ರೆ ಕಣ್ಣು, ಇದೊಂದು ದೃಷ್ಟಿಕೋನವಾಯಿತು(ಯಾರಿಗೂ ಇಷ್ಟವಿಲ್ಲದ್ದು). ಎಲ್ಲಾ ದುಡ್ಡು ಕೊಡೋಕಾಗಲ್ಲ ಬೇಕಿದ್ರೆ ಸ್ವಲ್ಪ ಉಳಿಸಿಕೊಂಡು ಕೊಡಬಹುದು.... ಅಂದ್ರೆ, ಸುಮ್ಮನೆ ಸಂದರ್ಭಕ್ಕೆ ಹೇಳಿದ್ದು. ಎಲ್ಲರೂ ಕೈಲಾದಷ್ಟು ಮಾಡ್ತಾನೆ ಇರ್ತಾರೆ. ಇಲ್ಲಿಂದಾನೆ ಚಂದ್ರಲೋಕ ನೋಡ್ಬೇಕು, ಆದ್ರೆ ಕಾಣ್ತಿಲ್ಲ, ಏನ್ಮಾಡೋದು, ಕಣ್ಣು ಕುರುಡು ಅಂತ ಹೇಳೋಕಾಗಲ್ಲ! ಕಾಣುವಷ್ಟನ್ನು ನೋಡಬಹುದು. ಈಗಲೂ ಸಹ ಕಾಂಚಾಣದ ಪರವಾದ ಮಾತುಗಳಿವು, ಯಾಕೆ ಅಂತೀರಾ... ಕಾಂಚಾಣವನ್ನೇ ಗಳಿಸುವುದಕ್ಕೆಂದು ಸಮಯ ಹೊಂದಿಸಿಕೊಂಡು ಕಷ್ಟಪಟ್ಟೊ ಇಷ್ಟಪಟ್ಟೊ ದುಡಿದು ಕಾಂಚಾಣ ಬಂದಮೇಲೆ ಅಯ್ಯೋ ಇದಕ್ಕೆ ಕಣ್ಣಿಲ್ಲ, ಯಾರೊ ದುಡಿಸಿಕೊಂಡು ಕುರುಡು ಕಾಂಚಾಣ ಕೊಟ್ಟಿಟ್ಟಿದ್ದಾರೆ ಅನ್ನೋಕಾಗುತ್ತದಾ!? ಇದು ಆಧುನಿಕ ಲೋಕದ ಉವಾಚ, ಬ್ಯಾಂಕ್ ಅಲ್ಲಿ ಸುಮ್ಮನೆ ಬ್ಯಾಲೆನ್ಸ್ ರೂಪದಲ್ಲಿ ಕಾಂಚಾಣ ಇದ್ದರೆ ಅದು ನಿಜವಾಗಿಯೂ ಕುರುಡು ಕಾಂಚಾಣವಂತೆ. ಇದು ದೌರ್ಜನ್ಯ ತೋರುವ ಕುರುಡು ಕಾಂಚಣವಲ್ಲ, ದೃಷ್ಟಿವೈಕಲ್ಯದ ಕುರುಡು

ಕಾಂಚಾಣ. ಅಂದ್ರೆ, ದುಡ್ಡಿದ್ರೂ ದುಡಿತಾ ಇಲ್ಲ, ದುಡಿಸ್ತಾ ಇಲ್ಲ ಅಂತ. ದುಡ್ಡು ಹೇಗ್ರೀ ದುಡಿಯುತ್ತೆ, ನಾವು ದುಡಿದು ಗಳಿಸೋದೆ ದುಡ್ಡಲ್ವಾ!? ಹೌದು, ದುಡ್ಡು ಸಹ ದುಡಿಯಬೇಕಾಗಿದೆ ಈಗಿನ ಜನಮಾನಸದಲ್ಲಿ. ಮ್ಯೂಚುವಲ್ ಫಂಡ್ ಕೇಳೀರ್ತೀರ, ಅದರಲ್ಲೂ ಕಮಿಷನ್ ಗೋಲ್ಮಾಲ್, ಇನ್ನೆಲ್ಲ ದುಡಿಸೋದು ಅಂದ್ರೆ, ನೇರ ವ್ಯಾಪಾರೋದ್ಯಮ, ಶೇರು ಮಾರುಕಟ್ಟೆ ವ್ಯವಹಾರಗಳಲ್ಲಿ ಧುಮುಕೋದು. ದುಡ್ಕೊಂಡು, ಸ್ವಲ್ಪ ಕುಡಿಟ್ಕೊಂಡು ಸುಖವಾಗಿದ್ವಿ ಇದೇನಿದು ಇರೊ ನೆಮ್ಮದಿಯನ್ನೂ ಹಾಳು ಮಾಡುವಂತಿದೆಯಲ್ಲ ಅನ್ನಿಸೋದಂತೂ ಸಹಜ, ಈಗ ಟ್ರೆಂಡ್ ಅಲ್ಲಿರೋದು, ನಡೀತಾ ಓಡ್ತಾ ಇರೋದಂತೂ ಇದೆ.... ಕುರುಡು ಕಾಂಚಾಣ.

ಈಗಾಗಲೇ ಕುರುಡುತನದಿಂದಾಗಿ ಸುಮಾರು ದೂರು ಬಂದಾಯ್ತು, ಇನ್ನೂ ಕಾಂಚಾಣದ ಹಿಂದೆ ಹೋದರೆ ಮನೆ ಸೇರೊಲ್ಲ, ಬರಹ ಮನಸ್ಸೂ ಸೇರೊಲ್ಲ, ಸಾಕು ಅನ್ಸುತ್ತೆ. ಬರೀತಾ ಹೋದ್ರೆ ಆಯಾಮಗಳು ತೆರೆಯುತ್ತಾ ಹೋಗುತ್ತವೆ... ಕಾಂಚಾಣ ಕುರುಡಾಗದಂತೆ ನೋಡಿಕೊಳ್ಳಿ, ಕಾಂಚಾಣದಿಂದ ಕುರುಡುತನ ಬಾರದಂತೆ ನೋಡಿಕೊಳ್ಳಿ. ಕಣ್ಮುಚ್ಚಿದ ಮಾತ್ರಕ್ಕೆ ಕುರುಡರಾಗಿಬಿಡುವುದಿಲ್ಲ, ಹಾಗಂತ ಕಣ್ಮಿಟುಕಿಸುವಷ್ಟು ಸಮಯ ನೀಡದೆ ಹೋದರೆ ಕಣ್ಣೆ ಕಾಣಿಸುವುದಿಲ್ಲ, ಇವೆಲ್ಲವುಗಳು ವಿವರಣೆಯನ್ನು ಬಯಸುವ ಮಾತುಗಳು. ಮೂಕನಾದರೂ ಇಷ್ಟೆಲ್ಲಾ ಮಾತನಾಡಿ ನಿಮಗೆ ತೊಂದರೆ ಕೊಡಬಹುದಾಗಿರುವಾಗ ಕುರುಡನಾದರೂ ದಾರಿ ಕಾಣಬಹುದು, ಕಾಣಿಸಬಹುದು ಎನ್ನುವುದರಲ್ಲಿ ಹುರುಳಿಲ್ಲ ಅಂತೀರಾ!? ದಾರಿ ತಪ್ಪಿಸುವ ಕಾಂಚಾಣವೇ ಕುರುಡು ಕಾಂಚಾಣವಾದರೆ, ಕಾಂಚಾಣವನ್ನೇ ದಾರಿ ತಪ್ಪಿಸುವವರು......!!!!????

-o-

# ಹಳೆ ಪಾದ.. ಹೊಸ ಹೆಜ್ಜೆ

-ಜೈರಾಮ

ವೃದ್ಧಾಶ್ರಮಕ್ಕೆ ಬಿಟ್ಟ ಹೋಗುತ್ತಿದ್ದ ಮಗನನ್ನು ನೋಡಿ ತಂದೆ ನಕ್ಕಿದ.

"ನೀವೇಕೆ ನಗುತ್ತಿರುವಿರಿ?" ಎಂದು ಆತನ ಹೆಂಡತಿ ಕೇಳಿದಳು

"ನಮ್ಮ ಮಗ ನಮ್ಮ ಅಗತ್ಯವಿಲ್ಲದೆ ಸಮಾಜದಲ್ಲಿ ಬದುಕುವಷ್ಟು ವಿದ್ಯಾವಂತ, ಬುದ್ಧಿವಂತ, ಶಕ್ತಿವಂತ ನಾಗಿದ್ದಾನೆ.. ಅವನ ಬಗ್ಗೆ ಹೆಮ್ಮೆ ಅನಿಸುತ್ತದೆ " ಎಂದ.

ಆಗ ನಗುವ ಸರದಿ ಅವನ ಹೆಂಡತಿಯದಾಗಿತ್ತು.

"ಈಗ ನೀನೇಕೆ ನಗುತ್ತಿರುವೆ?" ಎಂದು ಗಂಡ ಕೇಳಿದ.

"ಆಗ ನಿಮ್ಮ ತಂದೆ ತಾಯಿಯನ್ನು ಬಿಟ್ಟು ಬದುಕುವಷ್ಟು ನೀವು ಶಕ್ತಿವಂತರಾಗಲಿಲ್ಲ.. ಕೊನೆಪಕ್ಷ ಈಗಲಾದರೂ ನನ್ನ ಬಿಟ್ಟು ಬದುಕುವಷ್ಟು ಶಕ್ತಿವಂತರಾಗಿ" ಎಂದು ಗಂಡನನ್ನು ಹುಸಿಕೋಪದಲ್ಲಿ ಛೇಡಿಸಿದಳು.

"ನಾನು ಎಂದಿಗೂ ಶಕ್ತಿವಂತನಾಗಲಾರೆ.. ನಾನು ಹೃದಯವಂತ" ಅಂತ ಹೇಳಿ ಗಂಡ ಹೆಂಡತಿಯ ಕೈ ಹಿಡಿದ. ಇಬ್ಬರು ತಮ್ಮ ಹೊಸ ಬದುಕಿನೆಡೆಗೆ ಹೆಜ್ಜೆ ಹಾಕುತ್ತಾ ಆಶ್ರಮ ಬಾಗಿಲ ಒಳಹೊಕ್ಕರು. ಹೃದಯವಂತ ಹಿರಿಜೀವಿಗಳು ಅವರನ್ನು ಸ್ವಾಗತಿಸಿದರು.

-o-



# ಕವನ: ಅಟ್ಟ

-ಮಂಗಳ.ಎಂ.ನಾಡಿಗ್



ಬಾಲ್ಯದಲಿ ಅಜ್ಜನ ಮನೆಯ
ಅಟ್ಟ ಹತ್ತುವ ಆಸೆ
ಮರದ ಏಣಿಯ ಎರಡೂ ಕೈಯ್ಯಲ್ಲಿ ಹಿಡಿದು
ಒಂದೊಂದೇ ಹೆಜ್ಜೆಯಿಟ್ಟು ಹತ್ತುತ್ತಿದ್ದರೆ
ಅಜ್ಜಿ ಹೇಳುತ್ತಿದ್ದರು ಬೀಳುತ್ತೀಯ,
ಹುಷಾರಾಗಿರು ಕೂಸೆ ॥

ವರುಷಕ್ಕಾಗುವಷ್ಟು ಹುಣಸೆಹಣ್ಣು, ಮೆಣಸಿನಕಾಯಿ
ಬೇಳೆಕಾಳುಗಳ ಮಸಿ ಹಿಡಿದ ಡಬ್ಬಿಗಳು,
ಹಣ್ಣಿಗ್ಹಾಕಿದ ಬಾಳೆಗೊನೆ, ಉಪ್ಪಿನಕಾಯಿ ಜಾಡಿಗಳು,
ಮರದ ಹಲಗೆಯ ಅಟ್ಟದ ಮೇಲೆ, ಕಬ್ಬಿಣದ ಪೆಟ್ಟಿಗೆಯಲಿ
ಅಡಗಿಹುದು ಮನೆಯ ಪಡಣೆ - ಪಟ್ಟು
ಯಾರಿಗೂ ಕಾಣದಂತೆ ಜೋಪಾನವಾಗಿರಿಸಿಹರು
ಕಾಪಾಡಿದ ಆಸ್ತಿಯ ಕಷ್ಟಪಟ್ಟು॥

ಅಟ್ಟದ ಮೇಲೆ ಪುಟ್ಟಲಕ್ಷ್ಮಿಯೆಂದು
ಹಣೆಯ ಮಾಡಿಹರು ಅಟ್ಟ
ಹಣೆಬರಹ ಬರೆದ ಬ್ರಹ್ಮನೇ ಕಿತ್ತುಕೊಂಡಮೇಲೆ
ಕೊಟ್ಟರು ವಿಧವೆ ಎಂಬ ಪಟ್ಟ
ಒಂಟಿಹೆಣ್ಣಿನ ಮನದ ನೋವು, ಅವಳು ಪಟ್ಟಕಷ್ಟ
ಅವಳಿಗೂ ಇಲ್ಲವೇ ಎಲ್ಲರಂತೆ ಚೆನ್ನಾಗಿರಬೇಕೆಂದು ಇಷ್ಟ॥

ಅಟ್ಟ ಹತ್ತುವಾಗ ಇತ್ತು ಬೆಳಕು ಸುತ್ತಮುತ್ತಲು
ಹತ್ತಿದ ಮೇಲೆ ಒಳಗೆ ಹೋದಂತೆ ಬರೀ ಕಗ್ಗತ್ತಲು
ಹೊಗಳೀ ಹೋಗಳೀ ಅಟ್ಟಕ್ಕೇರಿಸಿದ ಜನ
ಅಟ್ಟದಿಂದ ಕಾಲುಜಾರಿ ಬಿದ್ದಾಗ ಬರಲೇ ಇಲ್ಲ ಎತ್ತಲು
ಎಲ್ಲ ಕೈಕಟ್ಟಿ ನಗುತಿಹರಲ್ಲ ನಿಂತು ನೋಡುತ್ತ ಸುತ್ತಲು॥

-೦-

